# ಕಾಡಿನ ಕತೆಗಳು



## (ಮೌಗ್ಲಿ ಕತೆಗಳು)

ಮರಿಗಳ ವಿಭಾಗದ ಶತಮಾನೋತ್ಸವ
2016

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

# ಕಾಡಿನ ಕತೆಗಳು

## (ಮೌಗ್ಲಿ ಕತೆಗಳು)

**ಮರಿಗಳ ವಿಭಾಗದ ಶತಮಾನೋತ್ಸವ - 2016**

**(Centenary Year of Cubbing)**


ನಿರೂಪಣೆ

**ರಾ. ಚಂದ್ರಶೇಖರನ್,** ಎಲ್. ಟಿ. (ಕಬ್ಸ್)

ಮಾಜಿ ಸ್ಥಾನಿಕ ಆಯುಕ್ತ (ಪ್ರಕಟನೆಗಳು)

ರಾಜ್ಯ ಕಾರ್ಯಾಲಯ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ


**2016**




ರಾಜ್ಯ ಕಾರ್ಯಾಲಯ

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

ನಂ. 39, ಶಾಂತಿಗೃಹ, ಅರಮನೆ ರಸ್ತೆ

ಬೆಂಗಳೂರು 560 001

ದೂರವಾಣಿ : 2226 0017

**ಕಾಡಿನ ಕತೆಗಳು:** ನಿರೂಪಣೆ—ರಾ. ಚಂದ್ರಶೇಖರನ್

ಪ್ರಕಾಶಕರು
ರಾಜ್ಯ ಕಾರ್ಯಾಲಯ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ನಂ. 39, ಶಾಂತಿಗೃಹ, ಅರಮನೆ ರಸ್ತೆ
ಬೆಂಗಳೂರು 560 001
ದೂರವಾಣಿ : 2226 0017

ಪುಟಗಳು : xviii + 110

ಪ್ರಥಮ ಮುದ್ರಣ : ಡಿಸೆಂಬರ್ 2016; 1000 ಪ್ರತಿಗಳು

**ಬೆಲೆ: ರೂ. 50/-**

ನೈಜ ಚಿತ್ರಗಳು : ಶ್ರೀ ಕೆ. ಎನ್. ಮೂರ್ತಿ, ಶ್ರೀ ಎಂ. ಡಿ. ವೆಂಕಟೇಶ್
ಶ್ರೀ ಚಾಮುಂಡಿ ಸ್ಕೌಟ್ ಗ್ರೂಪ್, ಬೆಂಗಳೂರು 560 003.
ರೇಖಾ ಚಿತ್ರಗಳು : ಶ್ರೀಮತಿ ಕಲ್ಪನಾ ರಾವೆಲ್

ಮುದ್ರಕರು
ಬಿ. ಎನ್. ನಟರಾಜ್
ಶ್ರೀ ನಿತ್ಯಾನಂದ ಪ್ರಿಂಟರ್ಸ್
# 46, 4ನೇ ಅಡ್ಡರಸ್ತೆ, ಅಶೋಕನಗರ
ಬೆಂಗಳೂರು 560 050.
ದೂರವಾಣಿ : 2242 6027

# ಅಧ್ಯಕ್ಷರ ನುಡಿ

ಮಕ್ಕಳ ಮನಸ್ಸನ್ನು ಅರ್ಥಮಾಡಿಕೊಂಡು ಅವರ ಮಾತು-ಕತೆಗಳಿಗೆ, ಹಾಡು-ಕುಣಿತಗಳಿಗೆ, ಹರ್ಷೋಲ್ಲಾಸಗಳಿಗೆ ಮುಕ್ತ ಅವಕಾಶ ಕಲ್ಪಿಸುವ ಯಾವುದಾದರೂ ಒಂದು ವಿಶ್ವವ್ಯಾಪ್ತಿಯ ಸಂಘಟನೆ ಇದೆ ಎಂದರೆ, ಅದು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ. ಬೆಳೆಯುವ ವ್ಯಕ್ತಿಯ ಎಳೆ ವಯಸ್ಸಿನಲ್ಲಿ ಶಿಸ್ತು, ಸಭ್ಯತೆ, ಸೇವೆ, ಕ್ರಿಯಾಶೀಲತೆ ಮತ್ತು ಜೀವನ ವಿಶ್ವಾಸ ಮೊದಲಾದ ಮಾನವೀಯ ಸದ್ಗುಣಗಳ ಸಂಸ್ಕಾರ ನೀಡಲು ಲಾರ್ಡ್ ಬೇಡನ್ ಪೊವೆಲ್ ಅವರು ಪರಿಕಲ್ಪಿಸಿ ಹುಟ್ಟುಹಾಕಿದ ಸಂಸ್ಥೆಯ ಬಳ್ಳಿ ಬಿಟ್ಟ ಹೂವಾದ ಕಬ್ಸ್ ಚಟುವಟಿಕೆ ಆರಂಭವಾಗಿ ನೂರು ವರ್ಷಗಳಾಗಿವೆ. ಈ ವರ್ಷ (2016) ಅದರ ಶತಮಾನೋತ್ಸವ ವರ್ಷ.

ಮೌಗ್ಲಿ ಕತೆಗಳೆಂದೇ ಲೋಕಪ್ರಿಯವಾಗಿರುವ 'ಕಾಡಿನ ಕತೆಗಳು' ಮರಿಗಳ ಶಿಕ್ಷಣದ ಪ್ರಮುಖ ವಿಧಾನವಾಗಿದೆ. ಈ ಕೃತಿಯನ್ನು ಸ್ಕೌಟ್-ಗೈಡ್ ಚಳವಳಿಯ ಭೀಷ್ಮರಂತಿರುವ ಶ್ರೀ ರಾ. ಚಂದ್ರಶೇಖರನ್ ಅವರು ಸಿದ್ಧಪಡಿಸಿಕೊಟ್ಟಿರುವುದು ಸಮಯೋಚಿತ ಮತ್ತು ಸಂತಸದ ಸಂಗತಿ. ಇದು ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ ಮೂಲ 'ಜಂಗಲ್ ಬುಕ್'ನ ಕೇವಲ ಅನುವಾದವಾಗದೆ, ಶ್ರೀ ಚಂದ್ರಶೇಖರನ್ ಅವರ ಅನುಭವವೂ ಸೇರಿ ರೂಪುಗೊಂಡಿರುವ ಒಂದು ಉಪಯುಕ್ತ ಕೃತಿ. ಪ್ರಾಣಿಗಳು ಮತ್ತು ಮಾನವ ಜೀವಿಯ ಸಂಬಂಧ ಸ್ವಾರಸ್ಯದ ಮೌಗ್ಲಿ ಕತೆಯನ್ನು ಚಂದ್ರಶೇಖರನ್ ಅವರು ಇಲ್ಲಿನ ಸನ್ನಿವೇಶಕ್ಕೆ ಒಗ್ಗುವಂತೆ ನಿರೂಪಣೆ ಮಾಡಿದ್ದಾರೆ. ಕಬ್ ಮಾಸ್ಟರುಗಳು ಇದರ ಪ್ರಯೋಜನ ಪಡೆಯುತ್ತಾರೆಂದು ನಾನು ಆಶಿಸುತ್ತೇನೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕರ್ನಾಟಕ ಸ್ಕೌಟ್ ಶಾಖೆಯ ಶೈಕ್ಷಣಿಕ ಮಹತ್ವದ ಪುಸ್ತಕಗಳನ್ನು ಪ್ರಕಟಿಸುವಲ್ಲಿ ಶ್ರೀ ರಾ. ಚಂದ್ರಶೇಖರನ್ ಅವರ ಪಾತ್ರ ಗಣನೀಯವಾದದ್ದು; ಸ್ಮರಣೀಯವಾದದ್ದು. ಪ್ರಸ್ತುತ 'ಕಾಡಿನ ಕತೆಗಳು' ಅವರ ಮತ್ತೊಂದು ಉಪಯುಕ್ತ ಕೊಡುಗೆ. ಅವರಿಗೆ ವಂದನೆಗಳು.

ನಮ್ಮ ರಾಜ್ಯದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯನ್ನು ವಿಸ್ತರಿಸಲು, ಹೆಚ್ಚು ರಚನಾತ್ಮಕಗೊಳಿಸಲು ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಪಿ. ಜಿ. ಆರ್. ಸಿಂಧ್ಯ ಅವರು ವಹಿಸಿರುವ ಆಸಕ್ತಿ ನಿಜಕ್ಕೂ ಹೃದಯಸ್ಪರ್ಶಿ. ಅವರ ಹಿರಿತನದಲ್ಲಿ ಚಳವಳಿ ಮತ್ತಷ್ಟು ಚೇತೋಹಾರಿ ಆಗುವುದೆಂಬ ವಿಶ್ವಾಸ ನನಗಿದೆ. ಈ ಉಪಯುಕ್ತ ಕೃತಿಯನ್ನು ಪ್ರಕಟಿಸಲು ರಾಜ್ಯಸಂಸ್ಥೆಯ ಪ್ರಕಟಣಾ ವಿಭಾಗವು ಹರ್ಷಿಸುತ್ತದೆ.

ಬೆಂಗಳೂರು
01-12-2016

**ಗೊ. ರು. ಚನ್ನಬಸಪ್ಪ**
ಅಧ್ಯಕ್ಷ, ಪ್ರಕಟಣಾ ಸಮಿತಿ

# ಪ್ರಕಾಶಕರ ನುಡಿ

109 ವರ್ಷಗಳಾಗಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ 5-10 ವರ್ಷ ವಯೋಮಾನದ ಪುಟ್ಟ ಬಾಲಕರ-ಮರಿಗಳ ವಿಭಾಗಕ್ಕೆ 100 ವರ್ಷಗಳೇ ಆಗಿವೆ.

ಮರಿಗಳ ಶಿಕ್ಷಣದ ಪ್ರಮುಖ ನೆಲೆಗಟ್ಟು ಹಾಗೂ ವಿಧಾನ ಕತೆಗಳು. ಕತೆಗಳು ಮನಸ್ಸಿನ ಮೇಲೆ ಪ್ರಭಾವ ಬೀರಿ, ಅವರ ಸಚ್ಚಾರಿತ್ರ್ಯ ನಿರ್ಮಾಣದಲ್ಲಿ ಮಹತ್ತರ ಪಾತ್ರ ವಹಿಸುತ್ತವೆ. ಸ್ಕೌಟ್ ಸಂಸ್ಥೆಯ ಸಂಸ್ಥಾಪಕರಾದ ಲಾರ್ಡ್ ಬೇಡೆನ್ ಪೊವೆಲ್ ಅವರು ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ "ಜಂಗಲ್ ಬುಕ್"ಅನ್ನು, ಮರಿಗಳ ವಿಭಾಗದ ಪ್ರಮುಖ ವಿಧಾನವನ್ನಾಗಿ ಆರಿಸಿಕೊಂಡಿರುತ್ತಾರೆ.

ಪ್ರಸ್ತುತ "ಕಾಡಿನ ಕತೆಗಳು" ಪುಸ್ತಕದ ನಿರೂಪಕರಾದ ಶ್ರೀ ರಾ. ಚಂದ್ರಶೇಖರನ್‌ರವರು ತಮ್ಮ ಎಪ್ಪತ್ತೇಳು ವರ್ಷಗಳ ಅನುಭವ ಮತ್ತು ಪರಿಶ್ರಮಸಾರವೋ ಎಂಬಂತೆ, ಮೂಲನಿರೂಪಣೆಗೆ ಧಕ್ಕೆ ಬರದಂತೆ, ಸರಳವಾಗಿ ಮನಮುಟ್ಟುವಂತೆ ಕತೆಗಳನ್ನು ನಿರೂಪಿಸಿರುತ್ತಾರೆ.

ಪ್ರಕಟನಾಸಮಿತಿ ಅಧ್ಯಕ್ಷರಾದ ಶ್ರೀ ಗೊ. ರು. ಚನ್ನಬಸಪ್ಪನವರು "ಸಂಸ್ಥೆಯ ಭೀಷ್ಮರಂತೆ ಇರುವ ಶ್ರೀ ರಾ. ಚಂದ್ರಶೇಖರನ್ ಅವರು 'ಪ್ರಾಣಿ-ಮಾನವ'ಜೀವಿಗಳ ಸಂಬಂಧವನ್ನು ತಿಳಿಸುವ ಕಾಡಿನ ಕತೆಗಳನ್ನು ನಾಡಿನ ಸನ್ನಿವೇಶಕ್ಕೆ ಒಗ್ಗುವಂತೆ ನಿರೂಪಿಸಿರುತ್ತಾರೆ. ಚಳವಳಿಯ ಶೈಕ್ಷಣಿಕ ಮಹತ್ವದ ಪುಸ್ತಕಗಳ ಪ್ರಕಟಣೆಯಲ್ಲಿ ಶ್ರೀ ರಾ. ಚಂದ್ರಶೇಖರನ್ ಅವರ ಪಾತ್ರವು ಗಣನೀಯವೂ, ಸ್ಮರಣೀಯವೂ ಆಗಿದೆ" ಎಂದು ಅಭಿಪ್ರಾಯಪಟ್ಟಿರುತ್ತಾರೆ. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ. ಜಿ. ಆರ್. ಸಿಂಧ್ಯ ಅವರು ಮುನ್ನುಡಿ ನೀಡಿರುತ್ತಾರೆ. ಮರಿಗಳ ಉನ್ನತ ತರಬೇತು ದಾರರುಗಳೂ ಮತ್ತು ಸ್ಕೌಟ್ ತರಬೇತುದಾರರೂ ಪರಿಶೀಲಿಸಿರುತ್ತಾರೆ. ಅಲ್ಪಕಾ ಲದಲ್ಲಿ ಅಂದವಾಗಿ ಶ್ರೀ ನಿತ್ಯಾನಂದ ಪ್ರಿಂಟರ್ಸ್, ಬೆಂಗಳೂರು ಇವರು ಮುದ್ರಿಸಿ ಕೊಟ್ಟಿರುತ್ತಾರೆ. ಇವರೆಲ್ಲರಿಗೂ ರಾಜ್ಯ ಸಂಸ್ಥೆಯ ಪರವಾಗಿ ಆಭಾರಿಯಾಗಿದ್ದೇನೆ.

ಮರಿಗಳ ವಿಭಾಗದ ಶತಮಾನೋತ್ಸವ ಸಂದರ್ಭದಲ್ಲಿ ಶ್ರೀ ರಾ. ಚಂದ್ರಶೇಖರನ್ ಅವರ "ಕಾಡಿನ ಕತೆಗಳು" ಪುಸ್ತಕದ ಅಮೂಲ್ಯ ಕೊಡುಗೆಯನ್ನು ಸ್ಮರಿಸುತ್ತೇನೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯ ಪರವಾಗಿ ಬಹಳ ಹೆಮ್ಮೆಯಿಂದ ಪ್ರಕಟಿಸುತ್ತಿದ್ದೇನೆ.

ಸಂಸ್ಥೆಯ ಸ್ಕೌಟರುಗಳೂ, ತರಬೇತುದಾರರೂ ಈ ಉಪಯುಕ್ತ ಗ್ರಂಥದ ಸಹಾಯದಿಂದ ಮರಿಗಳ ವಿಭಾಗದ ಗುಣಾತ್ಮಕ ಶಿಕ್ಷಣ ಹಾಗೂ ಬೆಳವಣಿಗೆಯಲ್ಲಿ ಸಫಲರಾಗಲೆಂದು ಹಾರೈಸುತ್ತೇನೆ.

ಬೆಂಗಳೂರು - 560 001 **ಸಿ. ಎಸ್. ರೆಡ್ಡಿ**
01-12-2016 ರಾಜ್ಯಕಾರ್ಯದರ್ಶಿ

**ಪಿ. ಜಿ. ಆರ್. ಸಿಂಧ್ಯ**
ರಾಜ್ಯ ಮುಖ್ಯ ಆಯುಕ್ತರು
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ನಂ. 39, ಪ್ರಧಾನ ಕಾರ್ಯಾಲಯ
ಅರಮನೆ ರಸ್ತೆ, ಬೆಂಗಳೂರು

# ಮುನ್ನುಡಿ

ಸ್ಕೌಟಿಂಗ್‌ನಲ್ಲಿ ಮರಿಗಳ ವಿಭಾಗವು ಅತ್ಯಂತ ಆಕರ್ಷಣೀಯವೂ ಮನೋಲ್ಲಾಸ ನೀಡುವಂತಹುದೂ ಆಗಿದೆ. ಮರಿಗಳ ಶಿಕ್ಷಣ ಕ್ರಮಾಚರಣೆಯಿಂದ, ಮಕ್ಕಳು ಮುಂದೆ ಉತ್ತಮ ಸ್ಕೌಟುಗಳಾಗಲೂ, ಆ ಮೂಲಕ ಉತ್ತಮ ಪೌರರಾಗಲೂ ಭದ್ರವಾದ ಬುನಾದಿ ದೊರಕುತ್ತದೆ.

ಮಕ್ಕಳ ಎಳೆಯ ವಯಸ್ಸಿನಲ್ಲಿ ಕತೆಗಳ ಪಾತ್ರವು ಮಹತ್ತರವಾದುದು. ಮರಿಗಳ ಶಿಕ್ಷಣದಲ್ಲಿ ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ "ಜಂಗಲ್ ಬುಕ್–ಕಾಡಿನ ಕತೆಗಳು" ಪ್ರಭಾವಯುತವಾದ ಪಾತ್ರ ವಹಿಸುತ್ತವೆ. ಮೂಲಕತೆಯು ಇಂಗ್ಲಿಷ್‌ನಲ್ಲಿ ಇರುವ ಕಾರಣ, ಅನೇಕ ಕಬ್‌ಮಾಸ್ಟರುಗಳಿಗೆ ಅದರ ರಸಾಸ್ವಾದನೆ ಮಾಡಲೂ, ಪರಿಣಾಮಕಾರಿಯಾಗಿ ಮರಿಗಳಿಗೆ ಹೇಳಲೂ ಕಷ್ಟವಾಗುತ್ತದೆ.

ಈ ಹಿಂದೆ "ಬೆಳ್ಳಿ ಆನೆ" ಪ್ರಶಸ್ತಿ ವಿಜೇತ ದಿ॥ ಮು. ವೆಂಕಟಕೃಷ್ಣಪ್ಪ, ಶಿಡ್ಲಘಟ್ಟ ಅವರು "ಕಾಡಿನ ಕತೆಗಳು" ಪುಸ್ತಕವನ್ನು ಸಂಕ್ಷಿಪ್ತವಾಗಿ 1944ರಲ್ಲಿ ಬರೆದಿದ್ದರು. ಅದೇ ಸಮಯದಲ್ಲಿ ತರಬೇತಿ ವಿಭಾಗದ ರಾಜ್ಯ ಸ್ಥಾನಿಕ ಆಯುಕ್ತರಾಗಿದ್ದ ದಿ॥ ಎಸ್. ಭೈರಪ್ಪನವರು "ಕಾಡು ಕುಣಿತಗಳು" ಎಂಬ ಕಿರುಪುಸ್ತಿಕೆಯನ್ನು ಬರೆದಿದ್ದರು. ರಾಜ್ಯಸಂಸ್ಥೆಯ ಈ ಎರಡೂ ಪ್ರಕಟನೆಗಳು ಇಂದು ದೊರಕುತ್ತಿಲ್ಲ.

ಆ ಎರಡು ಪ್ರಕಟನೆಗಳಲ್ಲಿ ಕಂಡು ಬಂದ ಕೊರತೆಗಳನ್ನು ಸರಿಪಡಿಸಿ, ಜೊತೆಗೆ ಕಾಡಿನ ಕತೆಗಳಲ್ಲಿ ಬರುವ 45 ಪಾತ್ರಗಳನ್ನೂ, ಅವುಗಳಲ್ಲಿ ಹಲವು ಪಾತ್ರಗಳ ಗುಣವಿಶೇಷಗಳನ್ನೂ ಪ್ರತ್ಯೇಕಿಸಿ ತಿಳಿಸಿ, ಒಂದೇ ಪುಸ್ತಕವನ್ನಾಗಿ ಸ್ಫುಟಗೊಳಿಸಿ, ಪ್ರಸ್ತುತ ಪ್ರಚಲಿತವಿರುವ ಸರಳ ಕನ್ನಡದಲ್ಲಿ ನಿರೂಪಿಸಿ, ಅತ್ಯಂತ ಆವಶ್ಯಕವಾದ, ಇಡೀ ಸ್ಕೌಟಿಂಗ್‌ನ ಮೂಲಾಧರವಾದ ಈ "ಕಾಡಿನ ಕತೆಗಳು" ಪುಸ್ತಕವನ್ನು ಹೊರತರಲಾಗಿದೆ. ಲೇಖಕರ ಈ ಪರಿಶ್ರಮವು ಮಕ್ಕಳಿಗೂ, ಕಬ್‌ಮಾಸ್ಟರುಗಳಿಗೂ, ತರಬೇತುದಾರರಿಗೂ, ಆಸಕ್ತರಿಗೂ ಉಪಯುಕ್ತವಾಗುತ್ತದೆ ಎಂಬುದರಲ್ಲಿ ಸಂದೇಹವಿಲ್ಲ.

ಸ್ಕೌಟಿಂಗ್ ಅನ್ನು ಮರಿಯಾಗಿ 1939ರಲ್ಲಿ ಪ್ರವೇಶಿಸಿ, ತಮ್ಮ ಏಳು

ದಶಕಗಳಿಗೂ ಮೀರಿದ "ಕಾಡಿನ ಕತೆಗಳ" ಅರಿವು ಮತ್ತು ಅನುಭವಗಳನ್ನು, ರಾಜ್ಯದ ಮರಿಗಳ ವಿಭಾಗದ ಇಂದಿನ ಹಿರಿಯ ತರಬೇತುದಾರರಾದ ಶ್ರೀ ರಾ. ಚಂದ್ರಶೇಖರನ್ ಅವರು ಶ್ರಮವಹಿಸಿ, ನಿರೂಪಿಸಿರುತ್ತಾರೆ. ಅವರ ಈ ಉತ್ತಮ ಕೊಡುಗೆಯು ಶ್ಲಾಘನೀಯವಾಗಿದೆ. ಅವರನ್ನು ಅಭಿನಂದಿಸುತ್ತೇನೆ.

ಕಾಡಿನ ಕತೆಗಳ ಜೊತೆಗೆ, ಸಂಸ್ಥಾಪಕ ಬಿ. ಪಿ. ಅವರು ಅದರಿಂದ ಆಯ್ದು ಕಲ್ಪಿಸಿ, ಮಕ್ಕಳಿಗೆ ಅಭಿನಯಿಸಲು ಅನುವು ಮಾಡಿಕೊಟ್ಟ ಕುಣಿತ-ಅಭಿನಯಗಳು, ಆಧುನಿಕ ರೀತಿಯಲ್ಲಿ ನಿರೂಪಿತವಾಗಿರುವುದು, ಪಾತ್ರಗಳ ಪರಿಚಯ ಮತ್ತು ಮೂಲಲೇಖಕ ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ ಜೀವನ ಪರಿಚಯ ಒಂದೇ ಕಡೆ ಇರುವುದು ಈ ಪುಸ್ತಕದ ವಿಶೇಷವಾಗಿದೆ.

ಶ್ರೀ ಚಾಮುಂಡಿ ಸ್ಕೌಟ್ ಗುಂಪಿನ ಗ್ರೂಪ್ ಲೀಡರ್ ಶ್ರೀ ಕೆ. ನರಸಿಂಹಮೂರ್ತಿ ಮತ್ತು ಕಬ್‌ಮಾಸ್ಟರ್ ಶ್ರೀ ಎಂ. ಡಿ. ವೆಂಕಟೇಶ್ ಅವರುಗಳು ಅಭಿನಯಗಳಿಗೆ ನೈಜ ಚಿತ್ರಗಳನ್ನೊದಗಿಸಿರುತ್ತಾರೆ. ಇದರಿಂದ ಕತೆಗೆ ಮತ್ತಷ್ಟು ಕಳೆ ಕಟ್ಟಿದಂತಾಗಿದೆ.

ಮರಿಗಳ ವಿಭಾಗದ ಶತಮಾನೋತ್ಸವ ಸಂದರ್ಭದಲ್ಲಿ ಈ ಉತ್ತಮ ಕೃತಿಯು ಬೆಳಕು ಕಂಡಿರುವುದು ಬಹಳ ಹೆಮ್ಮೆಯ, ಸಂತೋಷದ ವಿಷಯವಾಗಿದೆ. ಪ್ರಕಟನಾ ಸಮಿತಿಯ ಅಧ್ಯಕ್ಷರಾದ ಡಾ॥ ಗೊ. ರು. ಚನ್ನಬಸಪ್ಪನವರನ್ನೂ, ಹಸ್ತಪ್ರತಿಯ ರೂಪದಲ್ಲಿ ಪರಿಶೀಲಿಸಿ, ಸೂಕ್ತಸಲಹೆಗಳನ್ನಿತ್ತು ಮುದ್ರಣಕ್ಕೆ ಅನುಮೋದನೆ ನೀಡಿದ ಮರಿಗಳ ವಿಭಾಗದ ಹಿರಿಯ ತರಬೇತುದಾರರುಗಳಾದ ಶ್ರೀಮತಿ ರಾಧಮ್ಮ, ಶ್ರೀಮತಿ ಹೇಮಾ ವಿಜಯ ಕುಮಾರ್ ಮತ್ತು ಶ್ರೀ ಎಲ್. ಟಿ. ಲೋಕೇಶ್ ಅವರುಗಳನ್ನೂ, ಸ್ಕೌಟ್ ವಿಭಾಗದ ತರಬೇತುದಾರರುಗಳಾದ ಶ್ರೀ ಸಿ. ಎಸ್. ರೆಡ್ಡಿ ಮತ್ತು ಶ್ರೀ ಎನ್. ಶ್ರೀನಿವಾಸನ್ ಅವರುಗಳನ್ನೂ, ಅಲ್ಪಕಾಲದಲ್ಲಿ ಅಂದವಾಗಿ ಮುದ್ರಿಸಿರುವ ಶ್ರೀ ನಿತ್ಯಾನಂದ ಪ್ರಿಂಟರ್ಸ್‌ನ ಶ್ರೀ ಬಿ. ಎನ್. ನಟರಾಜ್ ಹಾಗೂ ಸಿಬ್ಬಂದಿವರ್ಗದವರನ್ನೂ ಅಭಿನಂದಿಸುತ್ತೇನೆ.

ಈ ಪುಸ್ತಕವು ಕಬ್‌ಮಾಸ್ಟರುಗಳು ತರಬೇತುದಾರರಿಗೆ ಉಪಯುಕ್ತವಾಗಿ ಮರಿಗಳ ವಿಭಾಗದ ಗುಣಾತ್ಮಕ ಹಾಗೂ ಗಣನಾತ್ಮಕ ಬೆಳವಣಿಗೆಗೆ ಪೂರಕವಾಗ ಲೆಂದು ಹಾರೈಸುತ್ತೇನೆ.

10-12-2016 **ಪಿ. ಜಿ. ಆರ್. ಸಿಂಧ್ಯ**

# ಸಂದೇಶ

ಸ್ಕೌಟ್ ಸಂಸ್ಥೆಯ ಸಂಸ್ಥಾಪಕರಾದ ಲಾರ್ಡ್‌ಬೇಡನ್ ಪೊವೆಲ್ ಅವರು ಮರಿಗಳ ಶಿಕ್ಷಣಯೋಜನೆಯನ್ನು ತಯಾರಿಸಿದಾಗ, ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ "ಜಂಗಲ್ ಬುಕ್" ಕತೆಗಳನ್ನು ನೆನೆದು, ತಮ್ಮ ದೂರದರ್ಶಿತ್ವವನ್ನು ಪ್ರದರ್ಶಿಸಿದರು. ಈ ಕತೆಗಳನ್ನು ಆಧರಿಸಿ, ಕಥಾನಾಯಕ ಮೌಗ್ಲಿಯ ಸುತ್ತಲೂ ಮರಿಗಳ ಶಿಕ್ಷಣವನ್ನು ಹೆಣೆದರು.

ಕಿರಿಯವಯಸ್ಸಿನಲ್ಲಿ ಮರಿ ಆಗಿದ್ದ ನಾನು, ಮೌಗ್ಲಿ ಕತೆಗಳು ಮರಿಗಳ ವಯಸ್ಸಿನ ಬಾಲಕರ ಮೇಲೆ ಪ್ರಭಾವ ಬೀರುವುದನ್ನು ನೇರವಾಗಿ ಅರಿತವನಾಗಿದ್ದೇನೆ. ಕಲ್ಪನೆ, ಸಾಹಸ, ಕಾಡಿನ ಪ್ರಾಣಿಗಳು, ಪ್ರಕೃತಿಯ ಮಡಿಲಲ್ಲಿ ಜೀವನ ಹೀಗೆ ಕತೆಯಲ್ಲಿ ಬರುವ ಪ್ರತಿ ಪಾತ್ರವೂ, ಸನ್ನಿವೇಶವೂ ನನ್ನ ಮನಸ್ಸಿನ ಮೇಲೆ ಪ್ರಭಾವ ಬೀರಿದುವು. ಆ ಕಾರಣ ನನ್ನಲ್ಲಿ ಪ್ರಕೃತಿ ಪ್ರೇಮ, ಹೊರಾಂಗಣ ಜೀವನದ ಬಗ್ಗೆ ಒಲವು ಮೂಡಿತು. ಸ್ಫೂರ್ತಿದಾಯಕ ಪರಿಣಾಮವುಂಟಾಯಿತು. ಮೌಗ್ಲಿ ಕತೆಗಳನ್ನು ನೆನೆದಾಗಲೆಲ್ಲಾ ನಾನು ಭಾವುಕನಾಗುತ್ತೇನೆ.

ಪ್ರಸ್ತುತ ಕನ್ನಡ ಪುಸ್ತಕದಲ್ಲಿ ಜಂಗಲ್ ಬುಕ್ ಕತೆಗಳು ಸರಳವಾಗಿ ಸ್ಪಷ್ಟವಾಗಿ, ತನ್ನದೇ ಆದ ಶೈಲಿಯಲ್ಲಿ ಮೂಡಿಬಂದಿದೆ. ಇದು ಲೇಖಕರ ಕನ್ನಡ ಭಾಷೆಯ ಮೇಲಿನ ಪಟುತ್ವವನ್ನು ಸೂಚಿಸುತ್ತದೆ.

ಹಲವಾರು ನೈಜ ಚಿತ್ರಗಳೂ ಸೇರಿದಂತೆ, 100ಕ್ಕೂ ಹೆಚ್ಚು ಚಿತ್ರಗಳಿಂದ ಅಲಂಕರಿಸಿ ಕತೆಗಳನ್ನು ಹೆಚ್ಚು ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ. ಕತೆಗಳಲ್ಲಿ ಬರುವ 45 ಪಾತ್ರಗಳನ್ನು ಪಟ್ಟಿ ಮಾಡಿ ವಿವರಿಸಿದ್ದಾರೆ. ಕುತೂಹಲಶಮನಕ್ಕಾಗಿ, ಮೌಗ್ಲಿಯು ಸಂಸಾರವಂದಿಗನಾಗಿ, ಅರಣ್ಯರಕ್ಷಕನಾಗಿ ನೆಲೆಗೊಳ್ಳುವ ವರೆಗಿನ ಕತೆಯನ್ನು ಮನ ಮಿಡಿಯುವಂತೆ ವಿವರಿಸಿದ್ದಾರೆ. 1950ರ ಸುಮಾರಿನಲ್ಲಿ ಕಾಡಿನಿಂದ ರಕ್ಷಿಸಲ್ಪಟ್ಟ ತೋಳಬಾಲಕನ ಬಗ್ಗೆ ಚಿತ್ರಸಹಿತ ಉಲ್ಲೇಖಿಸಿದ್ದಾರೆ.

ಲೇಖಕ ಶ್ರೀ ರಾ. ಚಂದ್ರಶೇಖರನ್ ಅವರು ಮರಿಗಳ ಕ್ಷೇತ್ರದಲ್ಲಿ (Field of ubbing) 77 ವರ್ಷಗಳಿಗೂ ಮೀರಿದ ಸ್ವಾನುಭಾವೀ ಹಿರಿಯರು. ಅವರ ನಿರಂತರ ಪರಿಶ್ರಮದ ಫಲವಾಗಿ, ಈ ಅದ್ಭುತವಾದ ಪುಸ್ತಕವು ಹೊರಬರುತ್ತಿರುವುದಕ್ಕಾಗಿ, ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಈ ಪುಸ್ತಕವು ಎಲ್ಲಾ ಸ್ಕೌಟರುಗಳಿಗೆ, ವಿಶೇಷವಾಗಿ ತರಬೇತುದಾರರಿಗೆ (ALTs, LTs) ಅತ್ಯುಪಯುಕ್ತ ಶಿಕ್ಷಣಸಂಪನ್ಮೂಲಸಾಧನವಾಗಿದೆ. ಆ ಕಾರಣ

ಕರ್ನಾಟಕದಲ್ಲಿ ಮರಿಗಳ ವಿಭಾಗದ ಗುಣಾತ್ಮಕ ವಿಕಾಸದಲ್ಲಿ ಗಣನೀಯ ಪಾತ್ರವಹಿಸುವುದಾಗಿ ಭಾವಿಸುತ್ತೇನೆ.

ಲೇಖಕ ಶ್ರೀ ರಾ. ಚಂದ್ರಶೇಖರನ್ ರವರು ಆದಷ್ಟು ಬೇಗ ಈ ಪುಸ್ತಕದ ಆಂಗ್ಲ ಪ್ರತಿಯನ್ನು ಹೊರತರಲಿ. ಆ ಮೂಲಕ ಭಾರತವೇ ಏಕೆ, ಇಡೀ ವಿಶ್ವದ ಕಬ್ಬಿಂಗ್ ಕ್ಷೇತ್ರದ ಮೇಲೆ ಇದರ ಸೊಗಡು ಹರಡಲಿ ಎಂದು ಕಳಕಳಿಯ ಆಶಾಭಾವವನ್ನು ವ್ಯಕ್ತಪಡಿಸುತ್ತೇನೆ.

ಮತ್ತೊಮ್ಮೆ ಲೇಖಕ ಶ್ರೀ ರಾ. ಚಂದ್ರಶೇಖರನ್ ಅವರನ್ನು, ಅವರ ಈ "ಕಾಡಿನೊಲುಮೆ ಸದಾ ನಿಮ್ಮನು ಕಾಯಲಿ..." ಅದ್ಭುತ ಕೊಡುಗೆಗಾಗಿ ಅಭಿನಂದಿಸುತ್ತೇನೆ.

"ನಿಮ್ಮ ಬೇಟೆ ಫಲಿಸಲಿ"

**ಎಂ. ಎ. ಖಾಲಿದ್**
ರಾಜ್ಯ ಆಯುಕ್ತ (ಸ್ಕೌಟ್ಸ್) ಕರ್ನಾಟಕ
ಅಂತಾರಾಷ್ಟ್ರೀಯ ಆಯುಕ್ತ (ಸ್ಕೌಟ್ಸ್)
ರಾಷ್ಟ್ರಕಾರ್ಯಾಲಯ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
ನವದೆಹಲಿ - 110 002

ಬೆಂಗಳೂರು - 560 001
10-12-2016



ಜಯಚಾಮರಾಜ ಒಡೆಯರ್

1918 ರಿಂದ ಅನೇಕ ಮರಿಗಳ ಹಿಂಡುಗಳು ಅನಧಿಕೃತವಾಗಿ ಕೆಲಸಮಾಡುತ್ತಾ ಬಂದಿದ್ದುವು. 1918ರಲ್ಲಿ ಜನಿಸಿದ ರಾಜಕುಮಾರ ಶ್ರೀ ಜಯಚಾಮರಾಜ ಒಡೆಯರ್ ಅವರು 1925 ರಲ್ಲಿ ಬಾಯ್ ಸ್ಕೌಟ್ಸ್ ಆಫ್ ಮೈಸೂರ್ (ಈಗಿನ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ) ಸಂಸ್ಥೆಯಲ್ಲಿ ಮರಿಯಾಗಿ ದೀಕ್ಷೆ ಪಡೆದರು, ಶ್ರೀ ಸಿರೂರ್ ಎಂಬುವರು ಅವರಿಗೆ ಕಬ್ ಮಾಸ್ಟರಾಗಿದ್ದರು. ದೀಕ್ಷೆ ಪಡೆಯುತ್ತಿದ್ದಂತೆ ಅವರನ್ನು ಪ್ರಧಾನ ಮರಿ (ಚೀಫ್ ಕಬ್) ಎಂದು ಘೋಷಿಸಲಾಯಿತಲ್ಲದೆ, ಮರಿಗಳ ವಿಭಾಗವನ್ನು ಅಧಿಕೃತವಾಗಿ ಪ್ರಾರಂಭಿಸಲಾಯಿತು. ಆ ಮಧುರ ಕ್ಷಣಗಳ ನೆನಪಿಗಾಗಿ ಈ ಕೃತಿಯ ರಚನೆ.

# ವಿಷಯಾನುಕ್ರಮಣಿಕೆ



**ಚಂ**ದ್ರೋದಯ ಮಾಗಿ, ಸಿಯೋನೀ ಕಾಡಿನೊಳು,
ತಿಂಗಳ ಬೆಳಕು ಹರಡಿರಲು, ನಗುವ
ಚಂ**ದ್ರ**ಮನು ಆಗಸದಿ ಮೆರೆದಿರಲು, ತಂಪೆರೆದಿರಲು,
**ಶೇ**ಖರಿಸಿದ ಧಾನ್ಯದ ತೆರದಿ, ತೋಳಗಳು ನೆರೆದು, "ಅಕೇಲ"ರಿಗೆ,
ನಿ**ಖ**ರಮಾಗಿ ಸ್ವಾಗತಿಸಿ, ವಂದಿಸಿದ ಕತೆಯನರುಹಿದ, ಸರ್
**ರ**ಡ್‌ಯಾರ್ಡ್ ಕಿಪ್ಲಿಂಗ್ ಮಹಾಶಯ
ರ**ನ್** ನೆನೆದು, ನಮಿಸುತ, ಆ ಅದ್ಭುತ "ಕಾಡಿನ ಕತೆ"ಗಳನು,
ಕಸ್ತೂರಿ ಕನ್ನಡದಿ ನಿರೂಪಿಸುತಿಹೆ ಓದಿ ॥

ಓದುಗರೇ? ನಿಮಗಿದೊಂದು ಸಿಹಿಮಾತು, ಕಿವಿಮಾತು
ವರ್ಷಗಳ ಹಿಂದೆ, ಪಚಮಢಿಯೊಳು ನಡೆದುದಾಯ್ತು।
ವೇಣುಗಂಗಾ ತೊರೆಯ ತೀರದ, ಮನೆಯೊಳೊನ್ದು ಸುದಿನ, ಬ್ರಾಹ್ಮೀಮುಹೂರ್ತ
ರೇಣುಮಾತ್ರನ ಮನೆದೈವ ಶ್ರೀಸತ್ಯಸಾಯಿ ಕನಸಲಿಬಂದುನಿಂದ ಸುಮುಹೂರ್ತ।
ಅಂದುನೀಡಿದಾದೇಶ, ಸಂದೇಶ, ಇಂದು ನುಡಿದಂತೆ ಹೊಚ್ಚಹೊಸದು,
ಎಂದಿಗೂ ಮರೆವ "ಏಳು, ಎದ್ದೇಳು, ಕಾಲಹರಣಬೇಡ, ಬರೆದುಮುಗಿಸು"।
ನುಡಿದಾದೇವ ಲೇಖನಿ ಹಿಡಿದು ನಡೆಸುತಿಹನು ೨೫ ವರ್ಷದಿಂದಾ,
ಹಿಡಿಗೊಂದು, ಮುಡಿಗೊಂದು, ಇದು ನನ್ನ ೨೫ನೆಯ ಕಥನಾರವಿಂದಾ।
ಕೃತಿಯದು ನೀವು ಹಿಡಿದಿರುವ "ಕಾಡಿನ ಕತೆಗಳು" ಕೇಳಿ,
ಸುಕೃತಪರಣ, ಅನುಭವ, ಆನಂದ ವೀವ "ಕಾಡಿನ ಕತೆಗಳು"ನಿಜವೇಳಿ ॥

# ಸ್ಮರಣಂ – ನಮನಂ

ನಾನು ಮರಿ (ಕಬ್) ಆಗಿದ್ದಾಗಿನ ದಿನಗಳು. (75 ವರ್ಷಕ್ಕೂ ಹಿಂದಿನ ಮಾತು). ನಮ್ಮ ಮೈಸೂರು ಜಯಾ ಗುಂಪಿನ ಡೆನ್‌ಗೆ ಹಳ್ಳ ಇಳಿದು ಹೋಗ ಬೇಕಾಗಿತ್ತು. ಆಟ ಪಾಟಗಳಿಗೆ ಜೂಬಿಲೀ ರಸ್ತೆಯ ಮತ್ತೊಂದು ಕಡೆ ಹಳ್ಳ ಇಳಿದು ಗಿಡಮರಗಳಿಂದ ಕೂಡಿದ ವನಪ್ರದೇಶ ಸೇರುತ್ತಿದ್ದೆವು. ಹಾಗಾಗಿ ನಾವು—ಮರಿಗಳು ಕಾಡಿನ ಮಧ್ಯೆ ಶಿಕ್ಷಣ ಪಡೆದಂತಿತ್ತು. ನಮ್ಮ ಕಬ್ ಮಾಸ್ಟರು ದಿವಂಗತರಾದ ಆರ್. ಜಿ. ಪದಕಿ, ಸಾಂಬಶಿವನ್ ಮತ್ತು ನನ್ನ ಪೂಜ್ಯ ತಂದೆ ಎಂ. ಹೆಚ್. ಆರ್. ಇವರುಗಳು ನಿಜಕ್ಕೂ ಬಾಲೂ, ಬಘೀರ, ಅಕೇಲರುಗಳೇ ಆಗಿದ್ದರು. ನಾನು ಹಿಂಡಿನಲ್ಲಿ ಮೌಗ್ಲಿ ಆಗಿದ್ದೆ. ಮುಂದೆ ಕಬ್ ಮಾಸ್ಟರ್ ಆಗಿ ಪಡೆದ ಮೂರೂ ಹಂತಗಳ ಶಿಬಿರಗಳಲ್ಲೂ ಮೌಗ್ಲಿ ಆಗಿ ಮುಂದುವರೆದದ್ದು ಹೆಮ್ಮೆ ಪಡುವ ವಿಷಯ.

ಮರಿಗಳ ಶಿಕ್ಷಣದ ಮೂಲ—ಕಾಡಿನ ಕತೆಗಳನ್ನು ಕೇಳಿ ತಿಳಿದದ್ದಲ್ಲದೆ, 1953 ರಲ್ಲಿ ಹಿಮಾಲಯ ವುಡ್ ಬ್ಯಾಡ್ಜ್ (NHQ1) ಪಡೆದಾಗ ಮದ್ರಾಸ್‌ನಿಂದ (ಇಂದಿನ ಚೆನ್ನೈ) ನನ್ನದೇ "ಜಂಗಲ್ ಬುಕ್" ಪ್ರತಿಗಳನ್ನು ತರಿಸಿಕೊಂಡೆ. ಸಾಧ್ಯ ವಾದಾಗಲೆಲ್ಲಾ ಬೆಸೆಂಟ್ ಪಾರ್ಕ್‌ಗೆ ಭೇಟಿ ನೀಡಿ ಅಲ್ಲಿನ ಪುಸ್ತಕ ಭಂಡಾರದಲ್ಲಿ 'ಜಂಗಲ್ ಬುಕ್'ನ ಬೃಹತ್ ಪ್ರತಿಯನ್ನು ಎರವು ಪಡೆದು ಓದಿದೆ. ಶಿಬಿರಕೇಂದ್ರದ ಜಂಗಲ್‌ನಲ್ಲಿ ವಿಹರಿಸಿ, ಕಲ್ಪನಾಪ್ರಪಂಚದಲ್ಲಿ ತೇಲಿದೆ.

1953 ರಿಂದ ಈವರೆಗೆ ಈ 63 ವರ್ಷಗಳು ಕರ್ನಾಟಕದ ಮೂಲೆ ಮೂಲೆ ಗಳಲ್ಲಿ, ಉತ್ತರ ಭಾರತದ ಅನೇಕ ಕಡೆಗಳಲ್ಲಿ, ಮೂಲ ತರಬೇತಿ ಶಿಬಿರದಿಂದ ಹಿಡಿದು, HWB ತರಬೇತಿ ಶಿಬಿರವೂ ಸೇರಿದಂತೆ ನೂರಾರು ಶಿಬಿರಗಳನ್ನು ನಡೆಸಿದ್ದೇನೆ. ಅವುಗಳಿಗಿಂತಲೂ ಹೆಚ್ಚು ಶಿಬಿರಗಳಲ್ಲಿ ಸಹಾಯ ಮಾಡಿದ್ದೇನೆ. ರಾಜ್ಯದ ವಿವಿಧ ಸ್ಥಳಗಳಲ್ಲಿ ಮೂರು ದಶಕಗಳಿಗೂ ಮೀರಿ ಅತ್ಯುತ್ತಮ ಮರಿಗಳ ಹಿಂಡನ್ನು ನಡೆಸಿದ್ದೇನೆ.

ಕಾಡಿನ ಕತೆಗಳನ್ನು ನಿರೂಪಿಸುವಾಗಲೆಲ್ಲಾ ದಿವಂಗತರಾದ ಎಂ. ಹೆಚ್. ರಾಮಚಂದ್ರ ರಾವ್, ಆರ್. ಜಿ. ಪದಕಿ, ಸಾಂಬಶಿವನ್, ಎ. ವಿ. ಸುಬ್ರಹ್ಮಣ್ಯಂ, ಮು. ವೆಂಕಟಕೃಷ್ಣಪ್ಪ, ಕೆ. ಕಾಶಿನಾಥ್, ಎಸ್. ಬಿ. ಕೌಶಿಕ್ ಮತ್ತು ಟಿ. ವಿ. ನೀಲಕಂಠಂ ಇವರುಗಳನ್ನು ಸ್ಮರಿಸುತ್ತೇನೆ.

ಕೇಳಿ, ಹೇಳಿ, ಓದಿ ಅನುಭವಿಸಿದ ಕಾಡಿನ ಕತೆಗಳು (ಮೌಗ್ಲಿ ಕತೆಗಳು) ಈ ಪುಸ್ತಕದ ಕಥಾವಸ್ತು. 1940ರ ದಶಕದ ರಾಜ್ಯ ಸಂಸ್ಥೆಯ ಕನ್ನಡ ಸ್ಕೌಟ್ ಪ್ರಕಟನೆಗಳ

ನನ್ನ ಪೂಜ್ಯ ತಂದೆ ಎಂ. ಹೆಚ್. ಆರ್. ಇವರುಗಳನ್ನು ನೆನೆಯುತ್ತೇನೆ. ಬಿ. ಪಿ. ಅವರ ವುಲ್ಫ್ ಕಬ್ಸ್ ಹ್ಯಾಂಡ್ ಬುಕ್ ಸಹ ನನ್ನ ಮೇಲೆ ಪ್ರಭಾವ ಬೀರಿರುವುದನ್ನು ಸ್ಮರಿಸುತ್ತೇನೆ.

ಕಾಡು ಕತೆಗಳು, ಆ ಸಂಬಂಧ ಪದ್ಯಗಳು, ಈ ಕತೆಗಳ ಆಧಾರಿತ ಅಭಿನಯ ಗಳು, ಕತೆಗಳಲ್ಲಿ ಬರುವ 45 ಪಾತ್ರಗಳು, ಅವುಗಳ ಗುಣವಿಶೇಷಣಗಳು, ಮತ್ತು ಮೂಲಲೇಖಕ ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ ಜೀವನ ಪರಿಚಯ ಒಂದೇ ಕೃತಿಯಲ್ಲಿ ಬಿಂಬಿತವಾಗಿರುವುದು ಈ ಪುಸ್ತಕದ ವಿಶೇಷ.

ಪ್ರಸ್ತುತ ನಿರೂಪಣೆಯನ್ನು ನನ್ನದೇ ಶೈಲಿಯಲ್ಲಿ ಬಿಂಬಿಸಿದ್ದೇನೆ. ಕೆಲವೆಡೆ ಮೂಲದ ಭಾಷಾಂತರದಂತೆ ಕಾಣಬಹುದು. ಕೆಲವೆಡೆ ಮು. ವೆಂ. ಕೃ. ಅವರ ಛಾಪು ಕಾಣಬಹುದು. ಕೆಲವೆಡೆ ಮತ್ತಾವುದೋ ನೆರಳು ಬೀಳಬಹುದು. ಆದರೆ ಅವೆಲ್ಲವುಗಳ ವಿವಿಧ ರೀತಿಯ ಪ್ರಭಾವದ ಫಲವೇ ನನ್ನ ನಿರೂಪಣೆ. ಅಷ್ಟೇ ಅಲ್ಲದೆ ನಾನು ಕಬ್ ಮಾಸ್ಟರಾಗಿ ಕಲ್ಪಿಸಿ ಮಕ್ಕಳಿಂದ ಹತ್ತಾರು ಅಭಿನಯಗಳನ್ನು ಮಾಡಿಸಿ, ಹಾಡುಗಳನ್ನು ಹಾಡಿಸಿದ್ದೇನೆ? ಈ ನಿರೂಪಣೆಯು "ವಿಶ್ವ ಕಬ್ಬಿಂಗ್‌ನ ಶತಮಾನೋತ್ಸವ" ಸಂದರ್ಭದಲ್ಲಿ ಹೊರಬರುತ್ತಿರುವುದು ನನಗೆ ಅಭಿಮಾನ ವೆನಿಸುತ್ತದೆ.

ನನ್ನ ಈ "ಅಳಿಲು ಸೇವೆ"ಗೆ ಮನ್ನಣೆ ನೀಡಿ, ಆಶೀರ್ವದಿಸಿರುವ ಪ್ರಕಟನಾ ಸಮಿತಿ ಅಧ್ಯಕ್ಷ ಶ್ರೀ ಗೊ. ರು. ಚನ್ನಬಸಪ್ಪನವರಿಗೂ, ರಾಜ್ಯ ಪ್ರಧಾನ ಆಯುಕ್ತ ಶ್ರೀ ಪಿ. ಜಿ. ಆರ್. ಸಿಂಧ್ಯ ಅವರಿಗೂ ನಮಿಸುತ್ತೇನೆ. ಹಸ್ತಪ್ರತಿ ರೂಪದಲ್ಲಿ ಓದಿ, ಸಲಹೆ, ಮೆಚ್ಚುಗೆ ನೀಡಿದ ಶ್ರೀಮತಿಯರಾದ ರಾಧಮ್ಮ, ಹೇಮಾ ವಿಜಯಕುಮಾರ್ ಮತ್ತು ಶ್ರೀ ಎಲ್. ಟಿ. ಲೋಕೇಶ್ ಇವರುಗಳಿಗೆ; ಹಿರಿಯ ಸ್ಕೌಟ್ ತರಬೇತುದಾರರಾದ ಶ್ರೀ ಎನ್. ಶ್ರೀನಿವಾಸನ್ ಹಾಗೂ ಶ್ರೀ ಸಿ. ಎಸ್. ರೆಡ್ಡಿ ಮತ್ತು ಉತ್ತಮ ನೈಜ ಚಿತ್ರಗಳನ್ನೊದಗಿಸಿರುವ ಶ್ರೀ ಚಾಮುಂಡಿ ಸ್ಕೌಟ್ ಗುಂಪಿನ ಶ್ರೀ ಕೆ. ಎನ್. ಮೂರ್ತಿ ಹಾಗೂ ಶ್ರೀ ಎಂ. ಡಿ. ವೆಂಕಟೇಶ್ ಇವರುಗಳಿಗೆ ವಂದನೆಗಳು. ಅಲ್ಪಕಾಲದಲ್ಲಿ ಅಂದವಾಗಿ ಮುದ್ರಿಸಿರುವ ಶ್ರೀ ನಿತ್ಯಾನಂದ ಪ್ರಿಂಟರ್ಸ್‌ನ ಶ್ರೀ ಬಿ. ಎನ್. ನಟರಾಜ್ ಅವರಿಗೂ ನನ್ನ ಧನ್ಯವಾದಗಳು.

ಕಾಡಿನೊಲುಮೆ ಸದಾ ನಿಮ್ಮೊಡನೆ ಇರಲಿ,

**ರಾ. ಚಂದ್ರಶೇಖರನ್**

ಬೆಂಗಳೂರು - 560 001 ಮರಿಗಳ ವಿಭಾಗದ ಹಿರಿಯ ತರಬೇತುದಾರ

14-12-2016 ಮತ್ತು ನಿರೂಪಕ

# ಪ್ರಸ್ತಾವನೆ

ಮಕ್ಕಳನ್ನು "ದೇವರು" ಎನ್ನುತ್ತಾರೆ. ಭಾರತದ ಸಾಂಪ್ರದಾಯಿಕ ಹಿನ್ನೆಲೆಯಲ್ಲಿ ಮಕ್ಕಳನ್ನು ದೇವರಂತೆ ಪೂಜ್ಯಭಾವದಿಂದ ಕಾಣುವುದೂ, ಅವರ ಶುಶ್ರೂಷೆ ಮಾಡುವುದೂ ಸಹಜವಾಗಿದೆ. ಅಷ್ಟೇ ಅಲ್ಲದೆ, ಮಕ್ಕಳನ್ನು ದೇವರಂತೆ ಅಲಂಕರಿಸಿ (ಉದಾ: ಕೃಷ್ಣ ಜನ್ಮಾಷ್ಟಮಿ) ಸಂಭ್ರಮಿಸುವುದು ಸರ್ವೇಸಾಮಾನ್ಯ. ಮಕ್ಕಳು ಮುಗ್ಧರು. ಕಪಟ, ಮೋಸ ಇತ್ಯಾದಿ ತಿಳಿಯದವರು. ನೇರ ನಡವಳಿಕೆಯವರು, ಕುತೂಹಲಿಗಳು, ಸೃಜನಶೀಲರು, ಸ್ನೇಹಶೀಲರು, ಪ್ರೇಮಪೂರಿತರು.

ಹಾಗಾಗಿ ದೇವರನ್ನು "ಸಕಲ ಸದ್ಗುಣ ಸಾರ" ಎಂದು ವರ್ಣಿಸುತ್ತಾರೆ. ಈ ವರ್ಣನೆಯನ್ನು ಮಕ್ಕಳ ವಿಷಯದಲ್ಲಿ ಹೀಗೆ ಅನ್ವಯಿಸಬಹುದು.

**ಸ** = ಸದ್ಭಾವನೆಗಳು
**ಕ** = ಕಲ್ಪನಾ ವೈಶಾಲ್ಯತೆ
**ಲ** = ಲವಲವಿಕೆ
**ಸದ್ಗುಣ** = ಉತ್ತಮ ಮೌಲ್ಯಗಳು
**ಸಾ** = ಸಾಹಸ ಪ್ರವೃತ್ತಿ
**ರ** = ರಂಜನೆ (ತಮಗೂ, ಇತರರಿಗೂ)

ಈ ಪ್ರತಿಯೊಂದೂ ಗುಣವಿಶೇಷಗಳು ಅವರಲ್ಲಿ ಸುಪ್ತವಾಗಿದ್ದು, ಅವುಗಳ ಬೆಳವಣಿಗೆಗೆ ನಾವು ನೀಡುವ ಶಿಕ್ಷಣವು ಪೂರಕವಾಗಿರಬೇಕು. ಈ ರೀತಿಯ ಪೂರಕಶಿಕ್ಷಣಕ್ಕೆ ಅನುಸರಿಸುವ ಹಲವಾರು ವಿಧಾನಗಳಲ್ಲಿ ಪ್ರಮುಖವಾದ ಎಂಟು ಕ್ರಮಗಳನ್ನು ಅಕ್ಷರ ಮಾಲೆಯ ಮೊದಲ ನಾಲ್ಕು ಅಕ್ಷರಗಳಲ್ಲೂ; ಕಾಗುಣಿತದ ಮೊದಲ ನಾಲ್ಕು ಗುಣಿತಗಳಲ್ಲೂ ಕಾಣುತ್ತೇವೆ.

**ಅ** = ಅಭಿನಯ, ನೃತ್ಯ
**ಆ** = ಆಟಗಳು
**ಇ** = ಇಂಗಿತವರಿತ ಶಿಕ್ಷಣ
**ಈ** = ಈಶ್ವರ ಪ್ರಜ್ಞೆ (Awareness of God)
**ಕ** = ಕತೆಗಳು, ಕಲ್ಪನೆ
**ಕಾ** = ಕಾಡಿನ ವಾತಾವರಣ
**ಕು** = ಕುಣಿತಗಳು
**ಕೂ** = ಕೂಗಾಟಗಳು

ಎಲ್ಲರಿಗೂ ತಿಳಿದಿರುವಂತೆ ಸ್ಕೌಟಿಂಗ್ 1907 ರಲ್ಲಿ ಪ್ರಾರಂಭವಾಯಿತು. ಅದು ವಿಕಾಸ ಹೊಂದುತ್ತಾ ಹೋದಂತೆ, ಹಿರಿಯರು, ಕಿರಿಯರು, ಹೆಣ್ಣು ಮಕ್ಕಳಾದಿಯಾಗಿ ಸಮವಸ್ತ್ರ ಧರಿಸಿದರು. ದೂರದೃಷ್ಟಿಯುಳ್ಳ ವ್ಯವಹಾರ ಚತುರರೂ, ವಾಸ್ತವಿಕ ದ್ರಷ್ಟಾರರೂ ಆದ ಸಂಸ್ಥಾಪಕ ಬೇಡನ್ ಪೋವೆಲ್ಲರು, ವಯೋಮಾನದ ಆವಶ್ಯಕತೆಗಳಿಗನುಗುಣವಾದ; ಗಂಡು-ಹೆಣ್ಣು ಮಕ್ಕಳ ದೈಹಿಕ, ಮಾನಸಿಕ, ಸಾಮಾಜಿಕ ಪ್ರವೃತ್ತಿಗಳಿಗೆ ಸ್ಪಂದಿಸುವ, ಪರಸ್ಪರ ಹೊಂದಿಕೊಳ್ಳುವಂತಹ, ಸ್ಕೌಟ್, ಗೈಡ್ ಶಾಖೆಗಳನ್ನೂ, ಅವುಗಳಲ್ಲಿನ ಮೂರು, ಮೂರು ವಿಭಾಗಗಳನ್ನೂ ರೂಪಿಸಿದರು. (ಗೈಡ್ ಶಾಖೆಯ ರೂಪುಕಲ್ಪನೆ ಮತ್ತು ನಿರ್ವಹಣೆಯಲ್ಲಿ ತಮ್ಮ ಸೋದರಿ ಅಗ್ನೆಸ್ ಅವರ, ಮುಂದೆ ತಮ್ಮ ಜೀವನಸಂಗಾತಿ ಒಲೇವ್ ಸೋಮ್ಸ್ ಅವರ ನೆರವು ಪಡೆದರು.) ಅದೇ ರೀತಿಯಲ್ಲಿ 1914-15 ರಲ್ಲಿ ಚಿಕ್ಕ ಮಕ್ಕಳ, ಸ್ಕೌಟ್ ಶಾಖೆಯ ಮರಿಗಳ ವಿಭಾಗದ ರೂಪುಕಲ್ಪನೆ ಮಾಡಿದಾಗ, ಮೇಲಿನ ಎಂಟು ವಿಧಾನಗಳ, ವಿಶೇಷವಾಗಿ ಕತೆ-ಕಲ್ಪನೆಗಳ ಪ್ರಾಮುಖ್ಯತೆಯ ಬಗ್ಗೆ ಗಮನ ಹರಿಸಿದರು.

ಬಿ. ಪಿ. ಅವರು ತಿನ್ನಾಳಿ ಓದುಗರು (Voracious Reader) ಹಾಗೂ ಸುವಹನ ಬರಹಗಾರರೂ (Easy flowing writer) ಆಗಿದ್ದರು. ತಾವು ಆಫ್ರಿಕಾದ ಕಾಡುಗಳಲ್ಲಿ ಕಾರ್ಯನಿರತರಾಗಿದ್ದಾಗ, ಬಿಡುವಿನ ವೇಳೆ ಓದಿದ್ದ ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ 'ಜಂಗಲ್ ಬುಕ್' ಅನ್ನು ನೆನಪಿಸಿಕೊಂಡರು. ಆ ಕತೆಗಳಲ್ಲಿ ಮಕ್ಕಳಿಗೆ ರುಚಿಸುವ, ಹಗಲುಗನಸು ಕಾಣುವ, ಸಾಹಸೋಪೇತವಾದ ಹಾಗೂ ಮಾರ್ಗದರ್ಶಕಗಳಾದ ಉತ್ಸುಕತೆ, ವಿಧೇಯತೆ, ಶಿಸ್ತು, ಸಹಕಾರ ಮನೋಭಾವಗಳೇ ಮುಂತಾದ ವಿಷಯಗಳು ನಿಹಿತವಾಗಿರುವುದನ್ನು ನೆನೆದರು. ಕೂಡಲೇ, ಇಂಡಿಯಾದಲ್ಲಿದ್ದ ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರಿಗೆ ಪತ್ರ ಬರೆದರು. ತಾವು ರೂಪಿಸಲಿರುವ "ಮರಿಗಳ ವಿಭಾಗ"ದ ಯೋಜನೆಯನ್ನೂ ಆ ಯೋಜನೆಯ ಅನ್ವಯ "ಜಂಗಲ್ ಬುಕ್" ಕತೆಗಳನ್ನು ಅಳವಡಿಸಬೇಕೆಂದಿರುವ ರೀತಿಯನ್ನೂ ವಿವರಿಸಿದರು. ಹಾಗೆ ಮಾಡಲು ಲೇಖಕರ ಅನುಮತಿಯನ್ನು ಕೋರಿದರು. ಕಿಪ್ಲಿಂಗ್ ಅವರು ಉದಾರ ಮನಸ್ಸಿನಿಂದ, ಬಹಳ ಸಂತೋಷದಿಂದ ಮರು ಟಪಾಲಿಗೆ ಅನುಮತಿಪತ್ರ ಕಳುಹಿಸಿದರು. ಹಾಗಾಗಿ 1916 ರಲ್ಲಿ ಅಧಿಕೃತವಾಗಿ ಪ್ರಾರಂಭವಾದ ಮರಿಗಳ ಶಿಕ್ಷಣದಲ್ಲಿ (Cubbing) "ಕಾಡಿನ ಕತೆಗಳು" ಪ್ರಮುಖ ಪಾತ್ರ ವಹಿಸುತ್ತಾ ಬಂದಿದೆ.

ಬಿ. ಪಿ. ಅವರು ಮರಿಗಳ ಶಿಕ್ಷಣಕ್ಕಾಗಿ ಅಳವಡಿಸಿಕೊಂಡ ಕಾಡಿನ ಕತೆಗಳ ಮೊದಲ ಭಾಗವನ್ನು, "ಗಿಲ್ ಕ್ರಾಫ್ಟ್" ಪುಸ್ತಕ ಮಾಲೆಯಲ್ಲಿ ನೀಡಿರುವ ವಿವರಣೆಯನ್ನು ಅನುಸರಿಸಿ ಇಲ್ಲಿ ಕೊಡಲಾಗಿದೆ. ಅದೇ ಸಂದರ್ಭ ಮುಂದುವರೆದು ಬಿ. ಪಿ. ಅವರೇ ಕಾಡಿನ ಕತೆಗಳಿಂದ ಆಯ್ದು ಅಳವಡಿಸಿದ ಆರು ಮುಖ್ಯ ಅಭಿನಯಗಳನ್ನು ವಿವರಿಸಲಾಗಿದೆ. ಅಲ್ಲಿಗೆ ನಿಲ್ಲದೆ, ಓದುಗರ ಕುತೂಹಲ ಶಮನಕ್ಕಾಗಿ ಎನ್ನಿ, ಕತೆಯ

ಪೂರ್ವಾಪರ ಆಗುಹೋಗುಗಳ ಮಾಹಿತಿಗೆನ್ನಿ—ಮೌಗ್ಲಿಯು ಬೆಳೆದು, ಪ್ರೌಢನಾಗಿ, ಮನುಷ್ಯನಾಗಿ ಊರು ಸೇರಿ, ಸಮಯ, ಸಂದರ್ಭಾನುಸಾರ ಊರು ಬಿಡಬೇಕಾಗಿ ಬಂದು, ಕಾಡಿನ ಗೀಳು ಬಿಡಲಾರದೆ, ಮತ್ತೆ ಕಾಡು ಸೇರಿ, ಬೇಟೆ ಆಡಿಕೊಂಡು ತನ್ನ ಸಹಚರ ಪ್ರಾಣಿಗಳೊಡನೆ ಕಾಲ ಕಳೆಯುತ್ತಾ, ಕಾಲಾನುಕ್ರಮದಲ್ಲಿ ಅರಣ್ಯ ರಕ್ಷಕನಾಗಿ ನೇಮಿತನಾಗಿ, ಸಂಸಾರವಂದಿಗನಾಗಿ ನೆಲೆಯೂರುವವರೆಗಿನ ಭಾಗ ಗಳನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

(ಗಮನಿಸಿ: ಕಬ್‌ಮಾಸ್ಟರು ಮಕ್ಕಳಿಗೆ ಪೂರಾ ಕತೆ ಹೇಳುವ ಆವಶ್ಯಕತೆಯಿರುವುದಿಲ್ಲ).

ಕಬ್ ಮಾಸ್ಟರು ಇಲ್ಲಿ ತಿಳಿದಿರಬೇಕಾದ ಅಂಶವೆಂದರೆ:

i) ಮಕ್ಕಳಿಗೆ ಹೇಳಲು ಕಾಡಿನ ಕತೆಗಳೇ ಎಲ್ಲವೂ ಅಲ್ಲ.

ii) ಈ ಪುಸ್ತಕದಲ್ಲಿ ಬರುವ ಆರು ಅಭಿನಯಗಳೇ ಕೊನೆಯಲ್ಲ. ಕಬ್‌ಮಾಸ್ಟರು ಕತೆಹೇಳುವ ವೈಖರಿಗೆ, ಅವುಗಳನ್ನು ಅಭಿನಯಗಳಿಗೆ ಅಳವಡಿಸುವ ಕಲ್ಪನೆ, ಕೌಶಲಗಳಿಗೆ ಮೇರೆಯಿಲ್ಲ.

iii) ಕಾಡಿನ ಕತೆಗಳ ಪ್ರಸಂಗ 10ರ ಬಗ್ಗೆ ಒಂದು ಮಾತು. ನಮ್ಮ ಸುತ್ತುಮುತ್ತಿನಲ್ಲಿ ನಡೆಯಬಹುದಾದ ಸಹಜ, ಸರಳ ಘಟನೆಯನ್ನು ಕತೆಯ ರೂಪದಲ್ಲಿ ಹೇಗೆ ನಿರೂಪಿಸಬಹುದು ಎಂಬುದಕ್ಕೆ ರಿಕ್ಕಿ-ಟಿಕ್ಕಿ-ಟಾವಿ ಪ್ರಸಂಗವು ಉತ್ತಮ ಉದಾಹರಣೆ ಆಗಿದೆ.

ಕತೆಗಳ ವೈವಿಧ್ಯತೆಗೆ ಬಂದರೆ ನಮ್ಮ ದೇಶದ ಪೌರಾಣಿಕ ಕತೆಗಳು, ಉಪನಿಷತ್ ಕತೆಗಳು, ಪಂಚತಂತ್ರ ಕತೆಗಳು, ಮಹಾಕಾವ್ಯಗಳು; ಜನಾದರಣೀಯ ವಾದ ಈಸೋಪನ ಕತೆಗಳು, ಟಾಲ್‌ಸ್ಟಾಯ್ ಕತೆಗಳು, ಯೇಸು ಹೇಳಿದ ಕತೆಗಳು, ಮಹಮದ್ ಪೈಗಂಬರರ ಕತೆಗಳು; ದೇಶದ ಹತ್ತಾರು ಅವತಾರಪುರುಷರ, ದಾರ್ಶನಿಕರ, ಆದರ್ಶ ವ್ಯಕ್ತಿಗಳು ಹೇಳಿದ, ನಡೆದು ತೋರಿದ ಅನುಕರಣೀಯ ಕತೆಗಳು; ವಿಶ್ವದ ವಿವಿಧ ದೇಶಗಳಲ್ಲಿ ಪ್ರಚಲಿತವಿರುವ ಆಯಾ ಸ್ಥಳೀಯ, ಸಾಂಪ್ರದಾಯಿಕ ಕತೆಗಳು—ಹೀಗೆ ಭೂಮಿಕೆಯು ಸವಿಸ್ತಾರವಾಗಿದ್ದು, ಕಾಡಿನ ಕತೆಗಳ ಜೊತೆಗೆ ಬಳಸಿಕೊಂಡರೆ, ಕಬ್‌ಮಾಸ್ಟರು ಮಕ್ಕಳ ಮನಾಕಾಶದಲ್ಲಿ ಪ್ರಕಾಶಮಾನರಾಗುತ್ತಾರೆ.

ಕಳೆದ ಶತಮಾನದಲ್ಲಿ ಅವಿಭಕ್ತ ಕುಟುಂಬಗಳು ಪ್ರಚಲಿತವಿದ್ದುವು. ಅಂತಹ ಕುಟುಂಬದಲ್ಲಿ ಬೆಳೆದ ನನಗೆ ನಮ್ಮಜ್ಜಿ ಶ್ರೀಮತಿ ಅಗಲಕುಂಟೆ ಪಾರ್ವತಮ್ಮರಾಮಣ್ಣ ಅವರು ಹೇಳುತ್ತಿದ್ದ ಪೌರಾಣಿಕ ಕತೆಗಳಲ್ಲಿ ತಲ್ಲೀನನಾಗಿ ಅತ್ತು ಕರೆಯುತ್ತಿದ್ದ, ನಕ್ಕು ನೆಗೆದಾಡುತ್ತಿದ್ದ ಕ್ಷಣಗಳು; ದುಗುಡಗೊಂಡು ಅಳು ನಿಲ್ಲದಾದಾಗ ನಮ್ಮಜ್ಜಿ ಸಾಂತ್ವನ ನೀಡುತ್ತಿದ್ದ ರೀತಿ, ಎಂಟು ದಶಕಗಳೇ ಕಳೆದರೂ ಈಗ ನಡೆಯುತ್ತಿರುವಂತೆ ಭಾಸವಾಗುತ್ತದೆ. ಇನ್ನು ನನ್ನ ಕಬ್ ಮಾಸ್ಟರುಗಳ ವೈಖರಿಯನ್ನು ಹೇಳತೀರದು.

ಪೂರಾ ಕತೆ, ಅಭಿನಯಗಳು, ಕತೆಗಳ ಸಂಬಂಧ ಮೂಲದಲ್ಲಿ ಬರುವ ಗೀತೆಗಳ ಭಾವಾನುವಾದ, ಕತೆಗಳಲ್ಲಿ ಬರುವ 45 ಪಾತ್ರಗಳು ಮತ್ತು ಅವುಗಳ ಗುಣವಿಶೇಷಗಳು ಬಿ. ಪಿ. ಅವರಿಂದ ಕಲ್ಪಿತವಾದ ಅಭಿನಯಗಳು, ಮೂಲಲೇಖಕ ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ ಸ್ಥೂಲವಾದ ಜೀವನ ಪರಿಚಯ, ಹೀಗೆ ಎಲ್ಲವೂ ಒಂದೇ ಕೃತಿಯಲ್ಲಿ ಬಿಂಬಿತವಾಗಿರುವುದು ಈ ಪುಸ್ತಕದ ವಿಶೇಷತೆಯನ್ನು ಎತ್ತಿ ಹೇಳುತ್ತದೆ.

"ಜಂಗಲ್ ಬುಕ್"ನ ಆಂಗ್ಲಮೂಲವನ್ನೇ ಓದಿ ರಸಾಸ್ವಾದನೆ ಮಾಡಿದಷ್ಟೇ ಮಧುರವಾದ ಅನುಭವವು ಓದುಗರಿಗೆ ಸಿಗಲಿ ಎಂಬ ಸದುದ್ದೇಶದಿಂದ ಈ ಕೃತಿಯನ್ನು ರಚಿಸಲಾಗಿದೆ. "ಜಂಗಲ್ ಬುಕ್"ನ ಮೂಲಪ್ರತಿ, ಸಂಕ್ಷಿಪ್ತ ಪ್ರತಿಗಳನ್ನು ಮೆಕ್ಮಿಲನ್ ಕಂಪೆನಿಯವರು ಇಂಗ್ಲಿಷ್‌ನಲ್ಲಿ ಪ್ರಕಟಿಸಿರುತ್ತಾರೆ. ನಿಮ್ಮದೇ ಪ್ರತಿ ತರಿಸಿ ಕೊಂಡು ಓದಿ ಸವಿಯುವಿರಾದರೆ, ಮತ್ತಿನ್ನೇನು!!! ಡಾ॥ ಅನಿಬೆಸೆಂಟ್ ಪಾರ್ಕ್‌ನ ಪುಸ್ತಕ ಭಂಡಾರದಲ್ಲಿ ಮೂಲಪ್ರತಿಗಳು ಪರಾಮರ್ಶೆಗೆ ದೊರಕುತ್ತವೆ.

ಕಬ್ ಮಾಸ್ಟರ್ ಕೈಪಿಡಿಯಲ್ಲಿ ತಿಳಿಸಿರುವ, 9 ಮತ್ತು 10 ನೆಯ ಅಧ್ಯಾಯ ಗಳಲ್ಲಿ ಬರುವ ವಿಷಯಗಳನ್ನು, ಕೂಲಂಕಷವಾಗಿ ಓದಿ ಮನನ ಮಾಡಿಕೊಂಡು ಆಚರಿಸಿ. ನಿಮ್ಮ ಕೈಲಿರುವ ಪುಸ್ತಕದ ವಿವರಣೆಗಳ ಜೊತೆಗೆ ಕಲ್ಪನೆ, ಹಾವಭಾವ ಗಳನ್ನು ಸೇರಿಸಿ ಮಕ್ಕಳ ಮನ ಸೆಳೆದು, ಅವರ ಮನದಾಳದಲ್ಲಿ ಹಿಂಗುವಂತೆ ಕತೆ ಹೇಳಿ. ಆಗ ಕತೆಯಷ್ಟೇ ಅಲ್ಲ, ನೀವೂ ಮಕ್ಕಳ ಜೀವನದಲ್ಲಿ ಚಿರಸ್ಥಾಯಿ ಆಗುತ್ತೀರಿ.

ಜೊತೆಗೂಡಿ ಬನ್ನಿ. ಶತಮಾನಗಳ ಹಿಂದೆ ಸರಿಯೋಣ. "ಸಿಯೋನೀ" ಕಾಡು ಸೇರೋಣ. ಕಾಡಿನ ನೆಂಟರೊಡನೆ ವಿಹರಿಸಿ ಕಾಲ ಕಳೆಯೋಣ. ಮುದ್ದು ಮಗು ನಾಥೂ–ಮೌಗ್ಲಿ ಶೈಶವದಿಂದ ಹಿಡಿದು, ಮಗುವಿನ ತಂದೆ ಆಗುವವರೆಗಿನ ಆಗುಹೋಗುಗಳನ್ನು ಸ್ಥೂಲವಾಗಿ ಗ್ರಹಿಸೋಣ.

ನಿಮ್ಮ "ಸಿಯೋನೀ" ಪರ್ಯಟನೆ ಸುಗಮವಾಗಿರಲಿ. ನಿಮ್ಮ ಗ್ರಹಣೆ, ಕಲ್ಪನೆ, ಅನುಭವ, ನಿರೂಪಣೆಗಳಿಂದ ಮಕ್ಕಳಿಗೆ ಸ್ಫೂರ್ತಿ ದೊರಕಲಿ. ಅವರ ಮುಂದಿನ ಜೀವನ ಹಸನಾಗಲಿ.

**ವನವೇ, ಜಲವೇ, ವಾಯುವೇ ತರುವೇ**
**ದೇಹಬಲ, ವಿವೇಕ, ವಿನಯಗಳು ಕೂಡಲಿ**
**ಕಾಡಿನೊಲುಮೆ ಸದಾ ನಿಮ್ಮೊಡನೆ ಇರಲಿ**
**ಕಾಡಿನೊಲುಮೆ ಸದಾ ನಿಮ್ಮನು ಕಾಯಲಿ.**



# ಅಧ್ಯಾಯ 1

## ಕತೆಪ್ರಸಂಗಗಳು — ಹಾಡುಗಳು

### ಪ್ರಸಂಗ 1

### ಮೌಗ್ಲಿಯ ಕತೆ

#### 1. ಕಾಡಿನಲ್ಲಿ ಅನಾಥನಾದ ಮುದ್ದುಮಗು ನಾಥೂ

ಹಿಂದಿನ ಕಾಲದಲ್ಲಿ ಭಾರತದೇಶದ ಬಹುತೇಕ ಭೂಭಾಗವು ಕಾಡುಪ್ರದೇಶವಾಗಿದ್ದಿತು. ದೇಶದ ಮಧ್ಯೆ ವಿಶಾಲವಾದ, ದಟ್ಟವಾದ ಗೊಂಡಾರಣ್ಯ ಪ್ರದೇಶವಿದ್ದಿತು. ಆ ಅರಣ್ಯಪ್ರದೇಶದ ಭಾಗವಾಗಿ ಸಿಯೋನೀ ಕಾಡು ಇದೆ (ಮಧ್ಯಪ್ರದೇಶ, ಛತ್ತೀಸ್‌ಘಡ ರಾಜ್ಯಗಳಿಗೆ ಅಂಟಿದ ಭಾಗ). ಅರಣ್ಯದ ಅಂಚಿನಲ್ಲಿ ಕಾನೇವಾಡ ಎಂಬ ಕುಗ್ರಾಮ. ಆ ಊರಿನಲ್ಲಿ, ಕಾಡಿನಲ್ಲಿ ಒಣ ಸೌದೆ ಸಂಗ್ರಹಿಸಿ, ಹೊತ್ತು ತಂದು, ಸಮೀಪದ ದೊಡ್ಡ ಊರುಗಳಲ್ಲಿ ಮಾರಿ, ಜೀವನ ನಡೆಸುವವರು ವಾಸವಾಗಿದ್ದರು. ಅಂತಹ ಒಂದು ಸಣ್ಣ ಕುಟುಂಬದಲ್ಲಿ ಮುದ್ದು ಮಗು ನಾಥೂ, ಅವನ ತಾಯಿ ಮೆಸ್ಸವ್ವ ಮತ್ತು ಮನೆ ಯಜಮಾನ ಇದ್ದರು.

ಅದೊಂದು ಹುಣ್ಣಿಮೆಯ ದಿನ. ಮಾತನಾಡಿಕೊಂಡು, ಹೆಚ್ಚು ಸೌದೆ ಸಂಗ್ರಹಿಸಿ ತಂದು, ವಿಶ್ರಮಿಸುವ ಯೋಚನೆಯೊಂದಿಗೆ, ಮಗುವನ್ನೂ ಎತ್ತಿಕೊಂಡು ಗಂಡ ಹೆಂಡತಿ ಕಾಡಿಗೆ ಹೋದರು. ಕೆಲಸದ ಭರದಲ್ಲಿ ಸೂರ್ಯನು ಮುಳುಗಿದ್ದಾಗಲೀ, ಹಾಲು ಬೆಳದಿಂಗಳು ಹರಡಿದ್ದಾಗಲೀ ಅವರಿಗೆ ತಿಳಿಯಲಿಲ್ಲ. ಹೊತ್ತು ಕಳೆದು ಮೈ ನಡುಕ ಪ್ರಾರಂಭವಾದಾಗಲೇ ಅವರಿಗೆ ತಿಳಿದದ್ದು. ಆ ಸಮಯದಲ್ಲಿ ಕಾರಡವಿಯನ್ನು ದಾಟಿ ಊರು ಸೇರುವುದು ಅಪಾಯಕರ ಎಂದೆಣಿಸಿ, ಸುತ್ತಲೂ ಬೆಂಕಿ ಹಾಕಿಕೊಂಡು ಮರದ ಬುಡದಲ್ಲಿ ಮಗುವನ್ನು ಮಲಗಿಸಿಕೊಂಡು, ಅವರಿಬ್ಬರೂ ವಿಶ್ರಮಿಸಿದರು.

ಅದೆಷ್ಟೋ ಸಮಯ ಕಳೆದಿದೆ. ಇದ್ದಕ್ಕಿದ್ದಂತೆ ಹುಲಿಯ ಘರ್ಜನೆ ಕೇಳಿ ಬಂದಿತು. ಆ ಆರ್ಭಟದಿಂದ ಎಚ್ಚೆತ್ತವರಿಗೆ ಹುಲಿ ಕಾಣಿಸಿತು. ಗಾಬರಿಯಿಂದ, ಭಯದಿಂದ ಮಗುವನ್ನೂ ಮರೆತು, ಊರಿನ ಕಡೆ ಓಡಿದರು.



ಸ್ವಲ್ಪ ಸಮಯದ ಬಳಿಕ ಕಣ್ಣು ಬಿಟ್ಟ ನಾಥೂ, ತಾಯಿಯನ್ನು ಹುಡುಕಿಕೊಂಡು ಹೊರಟಿತು.

## 2. ಮುದ್ದು ಮಗು ನಾಥೂ ತೋಳಗಳ ಗವಿ ಸೇರಿ ಮೌಗ್ಲಿ ಆದದ್ದು

ಅದು ಬೇಸಗೆಯ ಸಂಜೆ ಏಳು ಗಂಟೆಯ ಸಮಯ. ತಂದೆ ತೋಳವು ಎಚ್ಚೆತ್ತು, ನಿದ್ದೆಯ ಮಂಪರು ಕಳೆಯಲು, ಮುಂಗಾಲುಗಳನ್ನು ಚಾಚಿ, ಮೈ ಮುರಿದು, ಬೇಟೆಗೆ ಹೊರಡಲು ಅಣಿಮಾಡಿಕೊಂಡಿತು. ತಾಯಿ ತೋಳವು ತನ್ನ ನಾಲ್ಕು ಮರಿಗಳೊಂದಿಗೆ ಗುಹೆಯೊಳಗೆ ಮಲಗಿತ್ತು. ಗುಹೆಯೊಳಗೆ ಬೆಳದಿಂಗಳು ಹರಡಿತ್ತು.

ತಂದೆ ತೋಳವು, ಇನ್ನೇನು, ಗುಹೆಯಿಂದ ಹೊರಗೆ ಕಾಲಿಡಬೇಕು ಎನ್ನುವಷ್ಟರಲ್ಲಿ ಗುಹೆಯೊಳಗೆ ನೆರಳು ಬಿದ್ದಿತು. "ನಮಸ್ಕಾರ, ತೋಳಗಳ ನಾಯಕನಿಗೆ ಬಹು ಪರಾಕ್, ನಿಮಗೆ ಒಳ್ಳೆಯ ಬೇಟೆ ಸಿಗಲಿ, ನಿಮ್ಮ ಕೀರ್ತಿಯುತ ಮಕ್ಕಳಿಗೆ ಒಳ್ಳೆಯದಾಗಲಿ. ಪ್ರಪಂಚದಲ್ಲಿ ಹಸಿದವರನ್ನು ನೀವು ಎಂದೂ ಮರೆಯದಂತೆ ಇರಲಿ" ಎಂದು ಕುಯ್‌ಗುಡುವ ಧ್ವನಿಯಲ್ಲಿ ಪ್ರಾಣಿಯೊಂದು ಒರಲಿತು. ಅದೇ ಕೀಳು ಮನಸ್ಸಿನ, ಚಾಡಿಕೋರ, ಎಂಜಲು ನರಿ—ತಬಾಕಿ. ಬಹು ಸೋಮಾರಿ ಮತ್ತು ಪುಕ್ಕಲು ಪ್ರಾಣಿ, ಎಂಜಲಿಗಾಗಿ ಕಾಯುವ ಕೀಳುಪ್ರಾಣಿ.

"ಇಲ್ಲಿ ತಿಂಡಿ ಇಲ್ಲ. ಬೇಕಾದರೆ ಒಳಕ್ಕೆ ಬಾ" ಎಂದಿತು, ತಂದೆ ತೋಳ. "ಹಾಗೇನಿಲ್ಲ. ನನ್ನಂತಹ ಬಡಪ್ರಾಣಿಗೆ, ಒಂದು ಮೂಳೆ ಚೂರಾದರೂ ಸಾಕಾಗಿತ್ತು" ಎಂದಿತು, ತಬಾಕಿ.



ಹಾಗೆನ್ನುತ್ತಲೇ, ಗುಹೆಯ ಮೂಲೆಯಲ್ಲಿ ಬಿದ್ದಿದ್ದ ಮೂಳೆಯ ಚೂರನ್ನು ಕೊರಕಲು ಪ್ರಾರಂಭಿಸಿತು.

"ಷೇರ್‌ಖಾನ್ ಬರುವ ಹುಣ್ಣಿಮೆಯವರೆಗೂ, ತನ್ನ ಬೇಟೆ ಪ್ರದೇಶವನ್ನು ಈ ಬೆಟ್ಟ ಪ್ರದೇಶಕ್ಕೆ ಬದಲಾಯಿಸಿಕೊಂಡಿದೆ" ಎಂದು ತಬಾಕಿ ಹೇಳಿತು. ಯಾವಾಗಲೂ ಏನಾದರೊಂದು ತರಲೆ, ತಗಾದೆ ಇದೆಯೆಂದೇ ತಬಾಕಿಯ ಮಾತಿನ ಅರ್ಥ. ಇಪ್ಪತ್ತು ಮೈಲಿಗಳ ದೂರದಾಚೆ, ವೇಣುಗಂಗಾತೀರದಲ್ಲಿ, ವಾಸಮಾಡುವ ಹುಲಿಯೇ ಷೇರ್‌ಖಾನ್.

"ಅವನಿಗೆ, ಎಚ್ಚರಿಕೆ ಕೊಡದೆ ಬೇಟೆ ಪ್ರದೇಶವನ್ನು ಬದಲಾಯಿಸುವ ಹಕ್ಕಿಲ್ಲವಾದರೂ ಇಲ್ಲಿಗೆ ಬಂದಿದ್ದಾನೆ. ಹಾಗಾಗಿ, ಮೈಲಿಗಟ್ಟಲೆ ಬೇಟೆ ತಪ್ಪಿ ಹೋಗುತ್ತದೆ. ಆದ್ದರಿಂದ ಈ ಅವಧಿಯಲ್ಲಿ ನಾನು ಎರಡು ಪಟ್ಟು ಬೇಟೆಯಾಡಬೇಕು" ಎಂದಿತು ತಂದೆ ತೋಳ.

"ಅದು ಸರಿ, ನಾನು ನಿನಗೆ ಹೇಳದೇ ಇದ್ದರೂ ಆಗಿತ್ತು. ಕೆಳಗೆ ಕಾಡಿನಲ್ಲಿ ಶಬ್ದ ಬರುತ್ತಾ ಇದೆ" ಎಂದಿತು, ತಬಾಕಿ.

ಹಾಗೆ ಇನ್ನೂ ಹೇಳುತ್ತಿದ್ದಂತೆಯೇ, ಬೇಟೆ ಸಿಗದೆ ಕಂಗಾಲಾದ, ಕಾಡಿಗೆಲ್ಲಾ ತಿಳಿದರೆ ನನಗೇನು? ಎಂಬ ಬೇಜವಾಬ್ದಾರಿಯ, ಗುರುಗುಟ್ಟುವ ಇಮರಿದ ಹುಲಿಯ ಆರ್ಭಟ ಕೇಳಿಸಿತು.

"ಇಷ್ಟೊಂದು ಗಲಾಟೆ ಮಾಡುತ್ತಾ, ಬೇಟೆ ಪ್ರಾರಂಭ! ಮೂರ್ಖಪ್ರಾಣಿ!" ಎಂದಿತು, ತಂದೆ ತೋಳ. ಇನ್ನೂ ಕೇಳಿಸಿಕೊಳ್ಳುತ್ತಿದ್ದಂತೆಯೇ, ಕಾಡಿನ ಮೂಲೆ ಮೂಲೆಗಳಿಂದ ಪ್ರತಿಧ್ವನಿಸುವಂತೆ ಹುಲಿಯ ಗರ್ಜನೆ ಕೇಳಿಸಿತು. ಮನುಷ್ಯನನ್ನು ಬೇಡೆಯಾಡುವಾಗಿನ ಧ್ವನಿ, ಅದು.

"ಹ್ಞೂ! ಮನುಷ್ಯನ ಬೇಟೆ. ಹುಳ ಹುಪ್ಪಟೆ, ಕಪ್ಪೆಗಳು ಸಿಗಲಿಲ್ಲವೇನೋ? ಮನುಷ್ಯನ ಬೇಟೆಗೆ ಹೊರಟಿದ್ದಾನೆ. ಅದೂ ನಮ್ಮ ಪ್ರದೇಶದಲ್ಲಿ" ಎಂದು ಅಂದುಕೊಂಡಿತು ತಂದೆ ತೋಳ.

ಕಾಡಿನಲ್ಲಿ ಒಂದು ನಿಯಮವಿದೆ. ಕಾಡುಪ್ರಾಣಿಗಳು ಮನುಷ್ಯರನ್ನು ಬೇಟೆಯಾಡಬಾರದು. ಹಾಗೆ ಬೇಟೆಯಾಡಿದರೆ, ಇಂದೋ ನಾಳೆಯೋ, ಮನುಷ್ಯರು ಜಾಗಟೆ, ತುಪಾಕಿ ಮತ್ತು ಬೆಂಕಿಯೊಡನೆ ಬರುತ್ತಾರೆ. ಆಗ ಕಾಡಿನ ಎಲ್ಲಾ ಪ್ರಾಣಿಗಳೂ ತೊಂದರೆಗೀಡಾಗುತ್ತವೆ.

ಗರ್ಜನೆಯ ಧ್ವನಿ ಹೆಚ್ಚುತ್ತಾ ಬಂದು, ಇದ್ದಕ್ಕಿದ್ದಂತೆ ಬೇಟೆಯ ಮೇಲೆರಗಿದಂತೆ ಭಾಸವಾಯಿತು. ಕೂಡಲೇ ಅದು, ಗೋಳು ಕರೆಯಂತೆ ಕಿರುಚಿಕೊಂಡಂತಾಯಿತು. ಅದು ಷೇರ್‌ಖಾನ್‌ನಿಂದ ಹೊರಟ ವೇದನೆಯ ಧ್ವನಿ.

"ಬೇಟೆ ತಪ್ಪಿತೇನೋ? ಏನಾಯಿತು?" ಎಂದು ಉದ್ಗರಿಸಿತು, ತಾಯಿ ತೋಳ.

ತಂದೆ ತೋಳವು, ನಾಲ್ಕು ಹೆಜ್ಜೆ ಓಡಿ ಹೋಗಿ, ಇಳಿಜಾರಿನ ಕೆಳಗೆ, ಸೌದೆ ಒಡೆಯುವವರ ಗುಡಿಸಲುಗಳ ಕಡೆ ಇಣುಕಿ ನೋಡಿ, "ಮೂರ್ಖ! ಗುರಿತಪ್ಪಿ ಬೆಂಕಿಯ ಮೇಲೆ ಹಾರಿ ಕಾಲು ಸುಟ್ಟುಕೊಂಡಿದ್ದಾನೆ" ಎಂದಿತು ತಂದೆ ತೋಳ.

"ಮೇಲಕ್ಕೇನೋ ಬರುವಂತಿದೆ, ತಯಾರಾಗು" ಎಂದು ಎಚ್ಚರಿಸಿತು, ತಾಯಿ ತೋಳ. ತಂದೆ ತೋಳವು ಬಾಗಿ ನಿಂತು, ಮೇಲಕ್ಕೆ ಜಿಗಿಯಿತು. ಜಿಗಿಯುತ್ತಿದ್ದಂತೆಯೇ, ಬೆತ್ತಲೆಯಾಗಿದ್ದ ಪುಟ್ಟ ಮಗುವನ್ನು ಕಂಡು, ಚಲನೆಯನ್ನು ಥಟ್ಟನೆ ಅರ್ಧದಲ್ಲೇ ನಿಲ್ಲಿಸಿತು.

"ಅದೇನು?" ಎಂದು ಕೇಳಿತು, ತಾಯಿ ತೋಳ.

"ಮನುಷ್ಯನ ಮರಿ" ಎಂದುತ್ತರಿಸಿತು, ತಂದೆ ತೋಳ.

"ಮನುಷ್ಯನ ಮರಿಯೇನು? ನಾನು ಇಲ್ಲಿಯವರೆಗೆ ನೋಡೇ ಇಲ್ಲ. ಇಲ್ಲಿಗೆ ಕರೆದು ತಾ" ಎಂದಿತು, ತಾಯಿ ತೋಳ.

ತಂದೆ ತೋಳವು ಎಚ್ಚರಿಕೆಯಿಂದ ನಡೆದು, ಮಗುವಿನ ಚರ್ಮಕ್ಕೂ ಸಹ ಅಪಾಯವಾಗದಂತೆ, ತನ್ನ ಬಾಯಿಯಲ್ಲಿ ಹುಷಾರಾಗಿ ಕಚ್ಚಿಕೊಂಡು, ಗುಹೆಯೊಳಕ್ಕೆ ಕರೆತಂದು, ತಾಯಿ ತೋಳದ ಹತ್ತಿರ ಬಿಟ್ಟಿತು.



"ಪುಟ್ಟದಾಗಿ ಮುದ್ದಾಗಿದೆ. ಸಬಲವಾಗಿ ಸುಂದರವಾಗಿದೆ. ಎಷ್ಟು ಧೈರ್ಯಶಾಲಿ" ಎಂದು ತಾಯಿ ತೋಳವು ಮಗುವನ್ನು ಮೆಚ್ಚಿಕೊಂಡಿತು.

ಇದ್ದಕ್ಕಿದ್ದಂತೆ, ಗುಹೆಯ ಪ್ರವೇಶ ದ್ವಾರವು ಷೇರ್‌ಖಾನನ ದೊಡ್ಡ ತಲೆ ಮತ್ತು ಭುಜಗಳಿಂದ ಆವರಿಸಲ್ಪಟ್ಟು ಬೆಳದಿಂಗಳ ಬೆಳಕಿಗೆ ಅಡ್ಡ ಬಂದಿತು.



"ಷೇರ್‌ಖಾನನ ಆಗಮನದಿಂದ, ನಾವು ಪುನೀತರಾದೆವು. ಷೇರ್‌ಖಾನನಿಗೆ ಏನು ಬೇಕು?" ಎಂದಿತು, ತಂದೆ ತೋಳ.

"ಮನುಷ್ಯನ ಮರಿ ಈ ಕಡೆ ಬಂದಿತು, ಅದನ್ನು ನನಗೆ ಕೊಡು" ಎಂದು ಆಕ್ಷೇಪಣೆಯ ಧ್ವನಿಯಲ್ಲಿ ಉತ್ತರಿಸಿತು ಷೇರ್‌ಖಾನ್. ತೋಳಗಳು ಸ್ವತಂತ್ರ ಪ್ರಾಣಿಗಳು. ಇತರರಿಂದ ಹುಕುಂ ಪಡೆಯುವವರಲ್ಲ. ಹುಕುಂ ನೀಡುವ ಹಕ್ಕು ನಮ್ಮ ಹಿಂಡಿನ ನಾಯಕನಿಗೆ ಮಾತ್ರ ಮೀಸಲು. ಮನುಷ್ಯನ ಮರಿ ನಮ್ಮದು. ಬೇಕೆಂದರೆ ಅದನ್ನು ಕೊಲ್ಲುವ ಅಧಿಕಾರ ಕೂಡಾ ನಮ್ಮದೇ" ಎಂದು ತಂದೆ ತೋಳವು ಹೇಳಿತು.

"ಅದೇನು ಮಾತು? ಇಷ್ಟಾನಿಷ್ಟಗಳ ಮಾತು. ಮನುಷ್ಯನ ಮರಿ ನನ್ನದು. ನನಗೆ ಕೊಡು" ಎಂದು ಗವಿಯು ಗಡಗಿಕ್ಕುವಂತೆ ಹುಲಿಯು ಗರ್ಜಿಸಿತು.

ಆಗ ತಾಯಿ ತೋಳವು ಜಿಗಿದು ನಿಂತು, ಕಣ್ಣುಗಳು ಚಂದ್ರನಂತೆ ಪ್ರಕಾಶಿಸುತ್ತಿರಲು, "ಮನುಷ್ಯನ ಮರಿ ನಮ್ಮದು, ಅದನ್ನು ಕೊಲ್ಲಕೂಡದು. ಅದು

ಹಿಂಡಿನಲ್ಲಿ ಒಂದಾಗಿ ಬೆಳೆಯುತ್ತದೆ. ಜೊತೆಯಲ್ಲಿಯೇ ಬೇಟೆಯಾಡುತ್ತದೆ" ಎಂದು ಹೇಳಿ, "ಷೇರ್‌ಖಾನ್, ಹುಷಾರ್, ಅದು ನಿನ್ನನ್ನು ಬೇಟೆಯಾಡುವ ದಿನ ದೂರವಿಲ್ಲ" ಎಂದು ಎಚ್ಚರಿಸಿತು.

ಗುಹೆಯ ಪ್ರವೇಶ ದ್ವಾರದಲ್ಲಿ ಇರುಕಿಕೊಂಡು, ಈ ಎರಡು ತೋಳಗಳೊಡನೆ ಕಾದಾಡಲು ಆಗುವುದಿಲ್ಲವೆಂದು ತಿಳಿದ ಷೇರ್‌ಖಾನನು, "ಅದು ಹೇಗೆ, ಮನುಷ್ಯನ ಮರಿಯನ್ನು, ಹಿಂಡು ಬೆಳೆಸುವುದೋ ನೋಡಿಯೇ ಬಿಡುತ್ತೇನೆ. ಎಂದಿದ್ದರೂ ಅದು ನನ್ನ ಬಾಯಿಗೆ ಬರಲೇಬೇಕು" ಎಂದು ಹೇಳಿ, "ಕುಚ್ಚುಬಾಲದ ಕಳ್ಳರು" ಎಂದು ಮೂದಲಿಸುತ್ತಾ, ಗೊಣಗಿಕೊಳ್ಳುತ್ತಾ ಹೊರಟು ಹೋಯಿತು.

ಹುಲಿಯು ಹೊರಟು ಹೋದ ಬಳಿಕ "ಷೇರ್‌ಖಾನ್ ಹೇಳುವುದು ನಿಜ. ಮನುಷ್ಯನ ಮರಿ ಹಿಂಡಿನಲ್ಲಿರುವ ಬಗ್ಗೆ ಹಿಂಡು ಏನು ಹೇಳುತ್ತದೆ?" ಎಂದಿತು, ತಂದೆ ತೋಳ. ಆದರೆ ತಾಯಿ ತೋಳವು ಆ ಮರಿಯನ್ನು ತನ್ನಲ್ಲೇ ಇಟ್ಟುಕೊಳ್ಳಲು ನಿರ್ಧರಿಸಿತ್ತು. ಆದ ಕಾರಣ ಪುಟಾಣಿ ಕಪ್ಪೆಯಂತೆ ಕೂದಲಿಲ್ಲದ, ಚರ್ಮವನ್ನು ಹೊಂದಿದ್ದ ಆ ಮರಿಯನ್ನು "ಮೌಗ್ಲಿ" ಎಂದು ಕರೆಯಿತು.

ಮೌಗ್ಲಿಯು ಪುಟ್ಟ ಮರಿಗಳ ಜೊತೆ ಇದ್ದುಬಿಟ್ಟನು. ಮರಿಗಳು ಬೆಳೆದು, ಅಲ್ಪ ಸ್ವಲ್ಪ ಓಡಾಡುವಂತಾದ ಮೇಲೆ, ತಾಯಿ ಮತ್ತು ತಂದೆ ತೋಳಗಳು, ಅವುಗಳನ್ನು ಒಂದು ಹುಣ್ಣಿಮೆಯ ರಾತ್ರಿ, ಹಿಂಡಿನ ಸಭೆಗೆ, ಕಾಡಿನ ಮಧ್ಯದಲ್ಲಿದ್ದ ಸಭಾವೃತ್ತಕ್ಕೆ ಕರೆದೊಯ್ದುವು.

"ಸಭಾವೃತ್ತವು ಕಾಡಿನ ಮಧ್ಯೆ, ಗುಡ್ಡದ ತುದಿಯಲ್ಲಿ, ಬಂಡೆಗಳಿಂದ ಕೂಡಿದ, ಒಂದು ನೂರು ತೋಳಗಳು ಅವಿತುಕೊಳ್ಳಬಹುದಾದ ಪ್ರದೇಶ. ಆ ವೃತ್ತದ ಮಧ್ಯೆ ಸಭೆ ಸೇರಿ ತೋಳಗಳು ತಮ್ಮ ಪುಟಾಣಿ ಮರಿಗಳನ್ನು ಗುರುತಿಸಿ ಕೊಳ್ಳುತ್ತಿದ್ದವು. ಇದರಿಂದ ಅಡವಿಯಲ್ಲಿ ಅವುಗಳನ್ನು ಕಂಡಾಗ ಗುರುತಿಸಿ, ಕಾಪಾಡಲು ಅನುಕೂಲವಾಗುತ್ತಿದ್ದಿತು. ಪ್ರತಿ ಮರಿಯನ್ನು ವೃತ್ತದ ಮಧ್ಯಕ್ಕೆ ಕಳುಹಿಸಿದಾಗಲೂ, ಸಭಾವೇದಿಕೆಯ ಮೇಲೆ ಕುಳಿತುಕೊಳ್ಳುತ್ತಿದ್ದ ಅಕೇಲನು, ತಲೆಯೆತ್ತಿ ಹೀಗೆ ಹೇಳುತ್ತಿದ್ದನು":

"ನೋಡಿರಿ, ತೋಳಗಳೇ, ಸರಿಯಾಗಿ ನೋಡಿರಿ".

ಮೌಗ್ಲಿಯ ಸರದಿ ಬಂದಾಗ, ಆವಶ್ಯಕತೆ ಬಿದ್ದರೆ, ತಾನು ಆ ಮಗುವಿನ ಪರವಹಿಸಿ ಕಾದಾಡಲು, ತಾಯಿ ತೋಳವು ನಿಶ್ಚಯಿಸಿತು. ಮೌಗ್ಲಿಯನ್ನು ವೃತ್ತ ದೊಳಕ್ಕೆ ಕಳುಹಿಸಲಾಯಿತು. ಬೆಳದಿಂಗಳ ಬೆಳಕಿನಲ್ಲಿ ಅವನು, ಸಣ್ಣಪುಟ್ಟ ಕಲ್ಲು ಗಳೊಡನೆ ಆಟವಾಡಲು ಪ್ರಾರಂಭಿಸಿದನು. ಅಕೇಲನಾದರೋ, ತನ್ನ ಕಿವಿಯನ್ನೂ ಸಹ ಅಲುಗಿಸದೆ, ಕೂಗಿ ಹೇಳಿತು.

"ನೋಡಿರಿ, ತೋಳಗಳೇ, ಸರಿಯಾಗಿ ನೋಡಿರಿ".

ವೃತ್ತದ ಹೊರಗೆ ಘರ್ಜನೆ ಕೇಳಿಸಿತು.

"ಆ ಮರಿ ನನ್ನದು, ನನಗೆ ಕೊಟ್ಟು ಬಿಡಿ. ಸ್ವತಂತ್ರವಾದ ತೋಳಗಳಿಗೆ ಮನುಷ್ಯನ ಮರಿಯಿಂದೇನಾಗಬೇಕು?"—ಇದು ಷೇರ್‌ಖಾನನ ಕೊರಗು.

"ಹೌದು, ಮನುಷ್ಯನ ಮರಿಗೂ, ಸ್ವತಂತ್ರರಾದ ನಮ್ಮ ಹಿಂಡಿಗೂ, ಏನು ಸಂಬಂಧ" ಎಂದು ಕೆಲವು ತೋಳಗಳು ವರಲಿದವು.

ಮರಿಯು ಹಿಂಡಿಗೆ ಸೇರುವ ಬಗ್ಗೆ ವಿವಾದವುಂಟಾದರೆ, ಹಿಂಡಿನಲ್ಲಿ ಒಂದು ನಿಯಮವಿದೆ. "ಅಂತಹ ಮರಿಯ ಪರವಾಗಿ ಇಬ್ಬರು ಜಾಮೀನು ನಿಲ್ಲಬೇಕು. ಆದ್ದರಿಂದ ಈ ಮರಿಯ ಪರವಾಗಿ ಯಾರು ಮಾತನಾಡುತ್ತೀರಿ?" ಎಂದು ಅಕೇಲನು ಕೇಳಿತು".

ಮೊದಲಿಗೆ ಯಾರೂ ಮಾತನಾಡಲಿಲ್ಲ. ಸ್ವಲ್ಪಕಾಲದ ಬಳಿಕ, ಕಂದು ಬಣ್ಣದ, ಮುದಿ ಕರಡಿ "ಬಾಲು" ಎದ್ದು ಬಂದಿತು. ಅದು ಮರಿಗಳಿಗೆ ನಿಯಮಗಳನ್ನು ಹೇಳಿಕೊಡುತ್ತದೆ. "ಈ ಮನುಷ್ಯ ಮರಿಯ ಪರ ನಾನು ಮಾತನಾಡುತ್ತೇನೆ. ಆ ಮರಿಯಿಂದ ಯಾವ ರೀತಿಯ ತೊಂದರೆಯೂ ಆಗುವುದಿಲ್ಲ. ಅದು ಹಿಂಡಿಗೆ ಸೇರಲಿ. ನಾನು ಖುದ್ದಾಗಿ ಹೇಳಿಕೊಡುತ್ತೇನೆ" ಎಂದಿತು.

"ಇನ್ನೊಬ್ಬರು ಬೇಕು. ಬಾಲುವಿನ ಜೊತೆ ಯಾರು?" ಎಂದಿತು, ಅಕೇಲ.

ಆಗ ಕಪ್ಪು ನೆರಳೊಂದು, ನಿಧಾನವಾಗಿ, ವೃತ್ತದೊಳಕ್ಕೆ ಬಂದಿತು. ಅದೇ ಕರಿಯ ಚಿರತೆ 'ಬಘೀರ'. ಕಾಡಿನ ಬಲಿಷ್ಠ ಬೇಟೆಗಾರ. 'ನನಗೆ ತಿಳಿದಂತೆ, ಮರಿಯು ಹಿಂಡಿಗೆ ಸೇರುವ ಬಗ್ಗೆ ವಿವಾದವುಂಟಾದರೆ, ಅದರ ಜೀವವನ್ನು, ಖರೀದಿಸಿ ಕೊಳ್ಳಬಹುದು ಎಂಬ ನಿಯಮವೊಂದಿದೆ. ಅಲ್ಲವೆ?' ಎಂದು ತನ್ನ ಮೃದುಸ್ವರದಲ್ಲಿ ಹೇಳಿತು.

"ಹೌದು, ಅದು ನಿಯಮ" ಎಂದಿತು ಹಿಂಡು.

"ಹಾಗಾದರೆ, ಮನುಷ್ಯ ಮರಿಯನ್ನು ಹಿಂಡಿಗೆ ಸೇರಿಸಿಕೊಳ್ಳಲು ಒಪ್ಪುವುದಾದರೆ, ಬಾಲುವಿನ ಜೊತೆ ನಾನು ನಿಲ್ಲುತ್ತೇನೆ. ಈಗ ತಾನೇ, ಕಣಿವೆಯ ಕೆಳಗೆ, ನಾನು ಕೊಂದಿರುವ ಹೋರಿಯ ಶರೀರವಿದೆ" ಎಂದಿತು, ಬಘೀರ.

ಯಾವಾಗಲೂ ಹಸಿದಿರುವ ತೋಳಗಳು, "ಸೇರಿಕೊಳ್ಳಲಿ, ಮಳೆಗಾಲದಲ್ಲಿ ಮರಿ ಹೇಗಿದ್ದರೂ ಸಾಯುತ್ತಾನೆ. ಬೇಸಗೆಯ ಬಿಸಿಲಿನಲ್ಲಿ ಒಣಗುತ್ತಾನೆ. ಬೆತ್ತಲೆ ಕಪ್ಪೆಯು ನಮಗೇನು ತೊಂದರೆ ಮಾಡೀತು? ಸೇರಿಕೊಳ್ಳಲಿ" ಎಂದು ಅರಚಿದವು.

ಸಭಾವೇದಿಕೆಯ ಬಳಿ, ಅಕೇಲನೊಡನೆ ಬಾಲು, ಬಘೀರ, ತಾಯಿ ಮತ್ತು ತಂದೆ ತೋಳಗಳು, ಮತ್ತೆ ಮರಿಗಳೊಡನೆ ಮೌಗ್ಲಿಯನ್ನು ಬಿಟ್ಟು, ಉಳಿದೆಲ್ಲಾ ತೋಳಗಳೂ, ಹೋರಿಯ ಶರೀರವನ್ನು ಹುಡುಕುತ್ತಾ, ಕಣಿವೆಯ ಕಡೆ ಓಡಿದವು.



"ಇವನನ್ನು ಕರೆದುಕೊಂಡು ಹೋಗಿ. ಸ್ವತಂತ್ರ ಜನರಿಗೆ ಯೋಗ್ಯವಾದ ರೀತಿಯಲ್ಲಿ ಶಿಕ್ಷಣ ಕೊಡಿ" ಎಂದು ಅಕೇಲ ಹೇಳಿತು.

ಈ ರೀತಿಯಲ್ಲಿ ಕಾಡಿನ ನಿಯಮಾನುಸಾರ ಬಾಲೂ ನೀಡಿದ ಭರವಸೆ ಮತ್ತು ಬಘೀರನು ತೆತ್ತ (ತಾನು ಕೊಂದುಹಾಕಿದ್ದ) ಹೋರಿಯ ಬೆಲೆ, ಈ ಎರಡೂ ಕೂಡಿಬಂದು, ನಾಥೂ ಈಗ ಮೌಗ್ಲಿಯಾಗಿ ತೋಳಗಳ ಹಿಂಡಿನ ಸದಸ್ಯನಾದನು.

**ಅಭಿನಯ 1**

ಈಗ ಬಿ. ಪಿ. ರವರು ಅಳವಡಿಸಿದ ಮೊದಲ ಅಭಿನಯ, ಮರಿಗಳ ಹಿಂಡಿನ, ಆದರಣೀಯ, ಮಂಗಳಕರ "ಘನವಂದನೆ"ಯನ್ನು ಕಲಿತು, ಅಭಿನಯಿಸೋಣ.

ಅಧ್ಯಾಯ 2 ರಲ್ಲಿ ವಿವರವಾಗಿ ತಿಳಿಸಲಾಗಿದೆ.

"ಕಬ್ ಮಾಸ್ಟರುಗಳ ಕೈಪಿಡಿ"ಯಲ್ಲಿಯೂ, "ಮರಿಗಳ ಪುಸ್ತಕ"ದಲ್ಲಿಯೂ ಸಹ ವಿವರಣೆಯನ್ನು ಕಾಣಬಹುದು.

## 3. ಮೌಗ್ಲಿಯು ಬೆಳೆದು ಪ್ರೌಢನಾದುದು

ಮೌಗ್ಲಿಯು ಹಿಂಡಿಗೆ ಸೇರಿ ಹತ್ತು ಹನ್ನೆರಡು ವರ್ಷಗಳೇ ಕಳೆದಿವೆ. ತೋಳಗಳ ಮರಿಗಳಾದ ಬೂದಣ್ಣಗಳು ಮತ್ತು ಇತರ ಕಾಡಿನ ಗೆಳೆಯರೊಡನೆ ಆಟವಾಡುತ್ತಾ, ಹೊಸಹೊಸ ವಿಷಯಗಳನ್ನು ಕಲಿಯುತ್ತಾ ನೇರ ನುಡಿಯ, ನೇರ ನಡೆಯ, ಸ್ವತಂತ್ರವಾದ, ಸರಳವೂ ಶುದ್ಧವೂ ಆದ ಜೀವನವನ್ನು ರೂಢಿಸಿ ಕೊಳ್ಳುತ್ತಾನೆ. ಸದ್ದಿಲ್ಲದಂತೆ ನಡೆಯುವುದು, ಇತರರಿಗೆ ತೊಂದರೆ ಆಗದಂತೆ ನಡೆದುಕೊಳ್ಳುವುದನ್ನು ಕಲಿಯುತ್ತಾನೆ. ಪಂಚೇಂದ್ರಿಯಗಳು ಕ್ರಿಯಾಶೀಲವಾಗಿ ಸಹಾಯವಾಗುವಂತೆ ಹಿಡಿತದಲ್ಲಿಟ್ಟುಕೊಳ್ಳುತ್ತಾನೆ. ಅವನ ಶ್ರವಣಶಕ್ತಿಯು ಎಷ್ಟು ಚುರುಕಾಗಿತ್ತೆಂದರೆ, ಬೀಸುವ ಗಾಳಿಗೆ ತೊನೆದಾಡುವ ಹುಲ್ಲುಗರಿಗಳ 'ಸುಯ್' ಶಬ್ದವನ್ನಿ, ಮರ ಗಿಡಗಳ ಎಲೆಗಳ ಮರಮರವನ್ನಿ, ಬೇರ್ಪಡಿಸಿ ಹೇಳಬಲ್ಲವ ನಾಗಿದ್ದನು. ಹಾರು ಹಕ್ಕಿಗಳ ರೆಕ್ಕೆ ಪುಕ್ಕಗಳ ಸಪ್ಪಳದಿಂದ, ಹಕ್ಕಿಯನ್ನು ಗುರುತಿಸ ಬಲ್ಲವನಾಗಿದ್ದನು. ಬೇಟೆಗೆ ಹೊರಟಾಗ, ನಡಿಗೆಯ ಶಬ್ದದಿಂದ ಪ್ರಾಣಿಯನ್ನು ಗುರುತಿಸಬಲ್ಲವನಾಗಿದ್ದನು. ಘ್ರಾಣಶಕ್ತಿಯೂ ಸಹ ಚುರುಕಾಗಿದ್ದಿತು. ಬೀಸುವ ತಂಗಾಳಿಯು ತರುವ ವಾಸನೆ ಹಿಡಿದು ಮಳೆ ಬರುವ, ಮತ್ತಿತರ ಸೂಕ್ಷ್ಮವಿಷಯ ಗಳನ್ನು ಹೇಳಬಲ್ಲವನಾಗಿದ್ದನು. ವಾಸನೆ ಹಿಡಿದು ಪ್ರಾಣಿಗಳನ್ನೂ, ಅವುಗಳ ಸ್ಥಿತಿಯನ್ನೂ ಹೇಳಬಲ್ಲವನಾಗಿದ್ದನು. ದೃಷ್ಟಿಯಂತೂ ಬಹಳ ಸೂಕ್ಷ್ಮವಾಗಿದ್ದಿತು. ಬಾನಂಗಳದ, ಪರ್ವತ ಶಿಖರಾಗ್ರದಲ್ಲಿ ಹಾರಾಡುವ ವಿಹರಿಸುವ "ಚೀಲ್" (ಹದ್ದು)ಗಳಂತೆ ಎತ್ತರದಿಂದ, ದೂರದಿಂದ, ಹತ್ತಿರದಿಂದ ಬೆಳಕು, ನೆರಳುಗಳಲ್ಲಿ, ಪ್ರಾಣಿಗಳನ್ನು ಗುರುತಿಸುವ, ವಿವರಗಳನ್ನು ಗ್ರಹಿಸುವ ಬುದ್ಧಿ ಅವನದಾಗಿತ್ತು. ಅವನ ತೀಕ್ಷ್ಣ ದೃಷ್ಟಿಯ ಮುಂದೆ ಯಾವುದೇ ಪ್ರಾಣಿಯಾಗಲಿ ತಲೆತಗ್ಗಿಸಬೇಕಾದದ್ದೇ! ದೃಷ್ಟಿ ಹೊರಳಿಸಬೇಕಾದದ್ದೇ!

ಜೇನುಹುಳುಗಳಿಗೆ ತೊಂದರೆ ಆಗದಂತೆ, ಗೂಡಿನೊಳಗೆ ಕೈ ಹಾಕಿ, ತನಗೂ ತೊಂದರೆ ಆಗದಂತೆ ಎಚ್ಚರ ವಹಿಸಿ, ಜೇನುತುಪ್ಪವನ್ನು ತೆಗೆದು ಸವಿಯಬಲ್ಲವ ನಾಗಿದ್ದನು. ಹರಿವ ಹೊಳೆಗಳಲ್ಲಿ, ತಿಳಿನೀರು ಕೊಳಗಳಲ್ಲಿ ಮನಸೋ ಇಚ್ಛೆ ಈಜುವುದು, ಸ್ನಾನಪಾನಾದಿಗಳನ್ನು ಮಾಡುವುದು, ಸಾಕಷ್ಟು ನಿದ್ರಾ ವ್ಯಾಯಾಮ ಗಳಲ್ಲಿ ತೊಡಗುವುದು, ಹೀಗೆ ಮಾಡುತ್ತಾ ಬಲಶಾಲಿಯಾಗಿ, ಆರೋಗ್ಯವಂತನಾಗಿ, ಆಕರ್ಷಕ ವ್ಯಕ್ತಿತ್ವವುಳ್ಳವನಾಗಿ ಪ್ರೌಢನಾಗಿ ಬೆಳೆದನು. ಬಾಲೂ ಅವನಿಗೆ ವಿದ್ಯಾ, ಬುದ್ಧಿ ಕಲಿಸಿತು. ಬಘೀರನು ಕಷ್ಟಸಹಿಷ್ಣುತೆ, ಸಾಹಸಪ್ರಿಯತೆ, ಆವಶ್ಯಕತೆಗೆ ತಕ್ಕಂತೆ ಮಾತ್ರ ಬೇಟೆ ಆಡುವುದರ ಆಗುಹೋಗುಗಳು, ಇತಿ ಮಿತಿಗಳು, ಮಾಡ ಬಹುದಾದ, ಮಾಡಬಾರದ ಅಂಶಗಳು—ಹೀಗೆ ವಿವರವಾಗಿ ತಿಳಿಯಹೇಳಿತು. ಹೊಟ್ಟೆಯ ಆತುರಕ್ಕೆ ಹಸಿವು ತೀರಲು ಎಷ್ಟೋ ಅಷ್ಟು ಬೇಟೆ, ಅದರಲ್ಲೂ ನೀತಿ ನಿಯಮಗಳು. ಮನುಷ್ಯರ ತಂಟೆಗಾಗಲೀ, ಅವರ ಸಾಕುಪ್ರಾಣಿಗಳ ತಂಟೆಗಾಗಲೀ

ಹೋಗದಂತೆ ಎಚ್ಚರವಹಿಸುತ್ತಿದ್ದನು. ಹಾಗೇನಾದರೂ ತಪ್ಪಿ ನಡೆದರೆ, ಗುಂಡು, ಕೋವಿ ಹಿಡಿದ ಮನುಷ್ಯರ ದಂಡು ಕಾಡಿಗೆ ನುಗ್ಗಿ ಎಲ್ಲ ಪ್ರಾಣಿಗಳಿಗೂ ಅಪಾಯ ಉಂಟಾಗುತ್ತಿದ್ದಿತು. ಅಲ್ಲದೆ ಜಾನುವಾರು—ಹಸು, ಎತ್ತು, ಎಮ್ಮೆ, ಕೋಣ, ಮೇಕೆ, ಕುರಿ ಇತ್ಯಾದಿ, ತನಗೂ ಸಹ ಉಪಯುಕ್ತವಾದ, ಅಮೂಲ್ಯ ಪ್ರಾಣಿಗಳೆಂದು ತಿಳಿದಿದ್ದನು.

ಪ್ರತಿ ಪೌರ್ಣಮಿಯ ದಿನದಂದು, ತೋಳಗಳು ಸಭೆ ಸೇರುತ್ತಿದ್ದುವು. ಆ ದಿನಗಳಲ್ಲಿ ಮೌಗ್ಲಿಯು ತಪ್ಪದೇ ಹಾಜರಿರುತ್ತಿದ್ದನು. ಎಂದಾದರೂ ಈ ಮನುಷ್ಯ ಮರಿ ತನ್ನ ಬಾಯಿಗೆ ಬರಲೇಬೇಕು, ಎಂದು ಲೆಕ್ಕ ಹಾಕುತ್ತಾ, ಷೇರ್‌ಖಾನ್ ಸಹ ಬಂದು, ಬೆದರಿಕೆ ಹಾಕುತ್ತಿತ್ತು. ಅಕೇಲನಿಗೂ, ಮೌಗ್ಲಿಗೂ ವಿರುದ್ಧವಾಗಿ, ಗುಂಪಿನ ತೋಳಗಳ ಒಗ್ಗಟ್ಟನ್ನು ಮುರಿದು, ಎತ್ತಿಕಟ್ಟಲು ಹವಣಿಸುತ್ತಿತ್ತು. ಮುಳ್ಳು ಹಂದಿ–ಇಕ್ಕಿಯ ಮೂಲಕ, ಷೇರ್‌ಖಾನನ ಈ ಕುತಂತ್ರವು ಬಘೀರನಿಗೆ ತಿಳಿಯಿತು. ಬಘೀರನು ಈ ವಿಷಯವನ್ನು ಮೌಗ್ಲಿಗೆ ತಿಳಿಸಿ, ಎಚ್ಚರಿಕೆ ನೀಡಿದನು. ತಾನು ಉದಯಪುರದ ರಾಜನ ಮೃಗಾಲಯದಲ್ಲಿ, ಬಂಧನದಲ್ಲಿ ಹುಟ್ಟಿ ಬೆಳೆದುದನ್ನೂ, ಪ್ರೌಢನಾದ ಮೇಲೆ, ತನ್ನನ್ನು ತಾನರಿತು, ಬಂಧವಿಮುಕ್ತನಾಗಿ, ಕಾಡು ಸೇರಿ ಸ್ವತಂತ್ರನಾದುದನ್ನೂ ತಿಳಿಸಿದನು. ಹಾಗೆಯೇ ಮೌಗ್ಲಿಯೂ ಸಹ ಪ್ರೌಢನಾಗುತ್ತಿದ್ದಂತೆ, ಒಂದಲ್ಲ ಒಂದು ದಿನ, ಮನುಷ್ಯರ ಜೊತೆ ಸೇರಲೇ ಬೇಕಾಗುವುದೆಂದೂ, ಹಾಗೆ ಆಗುವವರೆಗೆ, ಕಾಡಿನಲ್ಲಿ ಷೇರ್‌ಖಾನನನ್ನು ಅನಿವಾರ್ಯವಾಗಿ ಎದುರಿಸಲೇ ಬೇಕಾಗುವುದಾಗಿಯೂ ತಿಳಿಸಿದನು.



ಬಘೀರನು ಮುಂದುವರೆದು, ಗುಂಪಿನ ಒಗ್ಗಟ್ಟನ್ನು ಒಡೆಯಲು, ಷೇರ್‌ಖಾನನು ಪ್ರಯತ್ನಿಸುತ್ತಿರುವುದನ್ನೂ; ವಯಸ್ಸಾಗುತ್ತಿರುವ, ಶಕ್ತಿಗುಂದುತ್ತಿರುವ ಅಕೇಲನನ್ನು ಮೂಲೆಗೊತ್ತಲು ಪ್ರೇರೇಪಿಸುತ್ತಿರುವುದನ್ನೂ ಮತ್ತೊಮ್ಮೆ ತಿಳಿಸಿದನು. ಮೃಗಗಳಿಗೆ ಮೀರಿದ ದೃಷ್ಟಿ ಮನುಷ್ಯ ದೃಷ್ಟಿ ಆದ ಕಾರಣ, ತೋಳಗಳೂ ಷೇರ್‌ಖಾನನೂ ಮೌಗ್ಲಿಯನ್ನು ದ್ವೇಷಿಸುತ್ತಿರುವ ವಿಷಯವನ್ನೂ ಹೇಳಿದನು. ಅಕೇಲನಿಗೆ ತೊಂದರೆ ಆದರೆ ಹಿಂಡಿನಲ್ಲಿ ಅನಾಯಕತೆ ಉಂಟಾಗುವ ಬಗ್ಗೆ ತಿಳಿಸಿದನು. ಮುಂದುವರೆದು ಎಲ್ಲಾ ಮೃಗಗಳೂ "ಕೆಂಪು ಹೂವು"ಗೆ (ಬೆಂಕಿ–ಕೆಂಪಲರು) ಹೆದರುವುದಾಗಿಯೂ, ಮನುಷ್ಯನು ಮಾತ್ರ ಕೆಂಪುಹೂವನ್ನು ಬೆಳೆಸಿ, ದುರಸ್ತಿನಲ್ಲಿಟ್ಟುಕೊಳ್ಳಬಲ್ಲವನೆಂದೂ ತಿಳಿಸಿ, ಮೌಗ್ಲಿಯು ಆದಷ್ಟು ಬೇಗ ಬೆಂಕಿಯನ್ನು ತಂದು ಬೆಳೆಸಿ, ದುರಸ್ತಿನಲ್ಲಿಟ್ಟುಕೊಳ್ಳಬೇಕೆಂದೂ, ಆವಶ್ಯಕತೆಬಿದ್ದಾಗ, ಅದರಿಂದ ಮೃಗಗಳನ್ನು ಹೆದರಿಸಿ, ಅಧೀನದಲ್ಲಿಟ್ಟುಕೊಳ್ಳಬಹುದೆಂದೂ ತಿಳಿಯಹೇಳಿದನು. ಕೂಡಲೇ ಮೌಗ್ಲಿಯು ಪಕ್ಕದ ಹಳ್ಳಿಗೆ ಓಡಿದನು. ಬುದ್ಧಿ ಬಂದ ಮೇಲೆ ಅದೇ ಮೊದಲು ಮನುಷ್ಯರನ್ನು ಕಂಡ ಕಾರಣ ಆಶ್ಚರ್ಯಗೊಂಡನು. ಬೆಂಕಿಯನ್ನು ಸಂಪಾದಿಸಿ ತಂದನು. ಮನುಷ್ಯರಂತೆ ಅದನ್ನು ಅಗ್ಗಿಷ್ಟಿಕೆಗೆ ಹಾಕಿ ಒಣಸೌದೆಯನ್ನು ಒಟ್ಟು, ಊದಿ ಬೆಂಕಿ ಮಾಡಿ ದುರಸ್ತಿನಲ್ಲಿಟ್ಟುಕೊಂಡನು.

ಅನತಿಕಾಲದಲ್ಲಿ, ಅದೊಂದು ಸಂಜೆ ಬೇಟೆಯಾಡುವಾಗ, ಮುದಿ ಅಕೇಲನು, ಆಹಾರಕ್ಕಾಗಿ ಜಿಂಕೆಯನ್ನು ಹಿಡಿಯಲಾರದೇ ಹೋದನು. ಅದೇ ಸಮಯಕ್ಕಾಗಿ ಕಾಯುತ್ತಿದ್ದ ಹಲವಾರು ತೋಳಗಳೂ, ಷೇರ್‌ಖಾನನೂ, ಅಕೇಲನನ್ನು ಹೀಯಾಳಿಸಿ ಜರಿದುವು. ಮೌಗ್ಲಿಗೆ ಇದನ್ನು ಕಂಡು ಸಹಿಸಲಾಗಲಿಲ್ಲ. ಕಾಡಿನ ನಿಯಮದ ಪ್ರಕಾರ, ಉಳಿದ ತೋಳಗಳು ಯಜಮಾನನನ್ನು ಕೊಂದು, ಹೊಸ ಯಜಮಾನನನ್ನು ನಿಯೋಜಿಸುವ ಬಗ್ಗೆ ಸಹ ತಿಳಿದಿದ್ದ ಕಾರಣ, ಕೂಡಲೇ ಕಾರ್ಯಪ್ರವೃತ್ತನಾದನು. ತಾನು ಜೋಪಾನ ಮಾಡಿದ್ದ ಬೆಂಕಿಯನ್ನು ಮತ್ತಷ್ಟು ಜ್ವಲಿಸಿ, ಕೊರಡುಗಳನ್ನೂ ತಯಾರಿಸಿದನು.

ಮರುದಿನವೇ ಹುಣ್ಣಿಮೆ. ಹಿಂಡು ಸಭೆ ಸೇರಿತು. ಬೇಟೆ ತಪ್ಪಿ ಅಧಿಕಾರ ಕಳೆದುಕೊಂಡ ಯಜಮಾನ ಅಕೇಲನು ಸಭಾಶಿಲೆಯ ಪಕ್ಕದಲ್ಲಿ ಕುಳಿತಿದ್ದನು. ಅಲ್ಲಿಗೆ ಬರಲು ಆಹ್ವಾನವಿಲ್ಲದೆ, ಬಂದರೂ ದೂರ ಇದ್ದುಕೊಂಡು ಗೊಣಗುತ್ತಿದ್ದ ಷೇರ್‌ಖಾನನು, ಆ ದಿನ ಧೈರ್ಯಮಾಡಿ ಸಭೆಯ ಒಳಕ್ಕೆ ಬಂದು ಅಕೇಲನನ್ನು ಮೂದಲಿಸಿದನು. ಮೌಗ್ಲಿಯು ತಡೆಯಲಾರದೆ ಹಿರಿಯರಿಗೆ ಗೌರವ ನೀಡುವ ಮನುಷ್ಯರೆಲ್ಲಿ? ಕೃತಘ್ನ ಮೃಗಗಳೆಲ್ಲಿ? ಎಂದು ಪ್ರತಿಭಟಿಸಿದನು. "ನೀನಾರು? ಬದುಕಿದ್ದರೂ ಸತ್ತಂತೆ ಕುಳಿತಿರುವ ಅಕೇಲನು ಮಾತನಾಡಲಿ" ಎಂದು ಸ್ವಲ್ಪ ವಯಸ್ಸಾದ ತೋಳಗಳು ನುಡಿದುವು. ಅಕೇಲನು ಎದ್ದುನಿಂತು, "ತನ್ನೊಡನೆ ಸೆಣಸಬಯಸುವ ತೋಳಗಳು ಒಂದೊಂದೇ ಬರಲಿ" ಎಂದು ಹೇಳಿದನು. ಯಾರೂ ಮುಂದೆ ಬರಲಿಲ್ಲ. ಷೇರ್‌ಖಾನನಿಗೆ ರೇಗಿತು. ತನಗೆ ಬೆಂಬಲ ನೀಡುವ

ತೋಳಗಳ ಜೊತೆ ಸೇರಿ, ಮೌಗ್ಲಿಯನ್ನು ಮೊದಲು ಕೊಲ್ಲಬೇಕು ಎಂದಿತು. ಅಕೇಲನು ಹಾಗೆ ಮಾಡುವುದು ಅನ್ಯಾಯ ಎಂದು ವಾದಿಸಿದನು. ತೋಳಗಳು ಅಕೇಲನ ಮೇಲೆ ಬೀಳಲು ಸಜ್ಜಾದುವು.

ಮೌಗ್ಲಿಯು ಆವೇಶಭರಿತನಾದನು. ತಾನು ದುರಸ್ತು ಮಾಡಿದ್ದ ಬೆಂಕಿಯನ್ನು ತಂದು ಅವುಗಳ ಮಧ್ಯೆ ಹರಡಿದನು. ಕೆಂಪುನಾಲಿಗೆ ಚಾಚಿ ಉರಿಯುತ್ತಿದ್ದ ಕೊರಡೊಂದನ್ನು ಕೈಲಿ ಹಿಡಿದು "ಹಾಳು ನಾಯಿಗಳೇ! ಕೃತಜ್ಞತೆ ಇಲ್ಲದ ಮೃಗಗಳೇ!" ಎಂದು ತೋಳಗಳನ್ನು ಜರಿದನು. ಬೆಂಕಿಯನ್ನು ಕಂಡು ಹೆದರಿದ ತೋಳಗಳು ದೂರವಾದುವು.



ಷೇರ್‌ಖಾನನನ್ನು ಕುರಿತು "ಪುಕ್ಕಲು ಬೆಕ್ಕೇ! ಇದೇ ಕೊನೆ, ಮತ್ತೇನಾದರೂ ಅಕೇಲನ ತಂಟೆಗೆ ಬಂದೆಯೋ ಹುಷಾರ್! ಇಲ್ಲಿಂದ ತೊಲಗು. ಕೈಗೆ ಸಿಕ್ಕು, ನಿನ್ನ ಚರ್ಮವನ್ನು ಸುಲಿದು ಹಾಕುತ್ತೇನೆ" ಎಂದು ಜರಿಯುತ್ತಾ, ಎಚ್ಚರಿಕೆ ಹೇಳುತ್ತಾ, ಕೈಲಿ ಹಿಡಿದಿದ್ದ ಜಗಮಗಿಸುವ ಕೊರಡಿನಿಂದ ಮತ್ತೆ ಮತ್ತೆ ಬಡಿಯುತ್ತಾ, ಅಲ್ಲಿಂದ ಓಡಿಸಿದನು.



ಇಷ್ಟಾದ ಮೇಲೆ ಮೌಗ್ಲಿಯು ಕುಸಿದು ಕುಳಿತನು. ಅಳು ಉಕ್ಕಿ ಬಂತು. ಎಷ್ಟೋ ಬಾರಿ ಸಹಾಯ ಮಾಡಿದ್ದ ತೋಳಗಳ ನಡೆವಳಿಕೆಗೆ ಜುಗುಪ್ಸೆಯಾಯಿತು. ಬಿಕ್ಕಿ ಬಿಕ್ಕಿ ಅತ್ತುಬಿಟ್ಟನು. ಬಘೀರನು, "ಅಳುವುದು ಮನುಷ್ಯರ ಲಕ್ಷಣ. ಉದ್ರೇಕಗೊಂಡಾಗ ಹೀಗಾಗುತ್ತದೆ. ಆದಷ್ಟು ಬೇಗ ನೀನು ಮನುಷ್ಯರನ್ನು ಸೇರುವುದು ಸೂಕ್ತ" ಎಂದು ಹೇಳಿ ಮೌಗ್ಲಿಗೆ ಸಾಂತ್ವನ ನೀಡಿ, ಬುದ್ಧಿ ಹೇಳಿದನು.

ಮೌಗ್ಲಿಯು ಅಕೇಲನಿಗೂ, ತಂದೆ ಮತ್ತು ತಾಯಿ ತೋಳಗಳಿಗೂ, ಹಿಂಡಿನ ಇತರರಿಗೂ ಬಾಲು ಬಘೀರರಿಗೂ, ವಿದಾಯ ಹೇಳಿ, ಮನುಷ್ಯ ಪ್ರಾಣಿಗಳನ್ನು ಸೇರಲು, ಮಹಾರಣ್ಯವನ್ನು ಬಿಟ್ಟು ಹೊರಟನು. ವರ್ಷಗಳ ಸಾಹಚರ್ಯ, ಅವುಗಳೆಲ್ಲವೂ ಮೌಗ್ಲಿಯು ಮತ್ತೆ ಬರಲೇಬೇಕೆಂದು ಗೋಗರೆದುವು. ಮೌಗ್ಲಿಯು, ತಾನು ಬರುವುದಾಗಿಯೂ ಆದರೆ ಹಾಗೆ ಬರುವುದಕ್ಕೆ ಮುಂಚಿತವಾಗಿ ಷೇರ್‌ಖಾನನನ್ನು ಕೊಂದು ಅವನ ಚರ್ಮವನ್ನು ಸುಲಿದು ತರುವುದಾಗಿಯೂ, ಯಾರೂ ತನ್ನನ್ನು ಮರೆಯಬಾರದೆಂದೂ, ಎಲ್ಲಾ ಪ್ರಾಣಿಗಳಿಗೂ ತಿಳಿಸಬೇಕೆಂದೂ ಹೇಳಿ ಮುನ್ನಡೆದನು.



# ಸಿಯೋನೀ ಗುಂಪಿನ ಬೇಟೆಯ ಹಾಡು



ಮುಂಜಾನೆಯಲಿ ಕಡವೆಯ ಕೂಗು। ಧೋ ಅಧೋ ಅಧೋ।
ಹಾರಿತು ಜಿಂಕೆ ನೆಗೆಯಿತು ಮೇಲೆ। ಕುಡಿಯುವ ನೀರಿನ ಕೊಳದಿಂದಾ।
ಹುಡುಕುತಬಂದೆ, ನಾನದಕಂಡೆ। ಧೋ, ಅಧೋ ಅಧೋ॥

ಮುಂಬೆಳಕಲಿ ಸಾಂಭೂರ್ ಕೇಕೆ। ಧೋ ಅಧೋ ಅಧೋ।
ಹಿಂಡಿನ ಬಳಿಗೆ, ನಡೆದೆನು ಬೇಗ। ಕಂಡಾಸುದ್ದಿಯ ತಿಳಿಸಲಿಕೆ।
ಬಂದೆವು ಹುಡುಕುತ, ಕೂಡಿ ಅಬ್ಬರಿಸಿ। ಧೋ ಅಧೋ ಅಧೋ॥

ಮುಂಬೆಳಕಲಿ ಹಿಂಡಿನ ನಾದ। ಧೋ ಅಧೋ ಅಧೋ।
ಗುರುತನು ಬಿಡದಾ ಕಾಡಿನ ಹೆಜ್ಜೆ। ಕಾಣಿರಿ ಮಸುಕಲಿ ಕಣ್ಣು, ಪಂಜ।
ಕೂಗಿರಿ, ಕೂಡಿ, ಹೊಡೆಯಿರಿ ಬೇಗ। ಧೋ ಅಧೋ ಅಧೋ।

* ಕಡವೆ = ಸಾಂಭೂರ್. ಈ ಎರಡೂ ಪದಗಳು ರೂಢಿಯಲ್ಲಿದೆ.

## ಪ್ರಸಂಗ 2

# ಬಂದರ್ ಲೋಗ್‌ಗಳ ಸಾಹಚರ್ಯೆಯಲ್ಲಿ

ಮೌಗ್ಲಿಯು ಹಿಂಡನ್ನು ಸೇರಿ ತೋಳಗಳ ಮಧ್ಯೆ ಕಾಡಿನಲ್ಲಿ ಸರಳವೂ, ಶುದ್ಧವೂ ಆದ ಜೀವನದ ಪಾಠಗಳನ್ನು ಕಲಿಯುತ್ತಿರುವ ಸಮಯ. ಷೇರ್‌ಖಾನನನ್ನು ಕೊಂದು, ಚರ್ಮವನ್ನು ಸುಲಿದು, ಸಭಾವೇದಿಕೆಯ ಮೇಲೆ ಹರಡಿ, ಅಕೇಲಲರನ್ನು ಅದರ ಮೇಲೆ ಕೂಡಿಸುವುದಾಗಿ ಶಪಥ ಮಾಡಿದ ಸಮಯ. ಕಾಡನ್ನು ಬಿಟ್ಟು ಊರಿಗೆ ಹೊರಡುವುದಕ್ಕೆ ಮುಂಚೆ ನಡೆದ ಒಂದು ಘಟನೆಯ ಬಗ್ಗೆ ಈಗ ಪ್ರಸ್ತಾಪಿಸುತ್ತೇನೆ.

ತೋಳದ ಮರಿಗಳು ತಮ್ಮ ಹಿಂಡಿನಲ್ಲಿ ಹೊಂದಿಕೊಂಡು ಜೀವನ ನಡೆಸಲು, ಬೇಕು-ಸಾಕಷ್ಟು ಮಾತ್ರ ಕಲಿಯುತ್ತಿದ್ದುವು. ಮೌಗ್ಲಿಯು ಮನುಷ್ಯ ಮರಿ ಆದ ಕಾರಣ ಕಾಡಿನ ಸಮಸ್ತ ವಿಷಯಗಳನ್ನೂ ಕಲಿಯಲು ಕುತೂಹಲಿಯಾಗಿದ್ದನು. ಇದನ್ನು ಗಮನಿಸಿದ ಬಾಲೂ ಅವನಿಗೆ ಹೆಚ್ಚು ವಿಷಯಗಳನ್ನು ಕಲಿಸಲು ಸಂತೋಷದಿಂದ ಮುಂದಾಯಿತು. ಆಗೊಮ್ಮೆ ಈಗೊಮ್ಮೆ ಬಘೀರನೂ ಸಹ ಜೊತೆ ಇದ್ದು, ಸಲಹೆ ನೀಡುತ್ತಿದ್ದನು. ವನವಿದ್ಯೆ; ವನ ಮತ್ತು ಜಲ ಸಂಬಂಧ ವಿಷಯಗಳು ಹಾಗೂ ನಿಯಮಗಳು; ತಮ್ಮದೇ ಪ್ರದೇಶ ಹಾಗೂ ಇತರರ ಪ್ರದೇಶಗಳಲ್ಲಿ ಬೇಟೆ ಆಡುವ ಸಮಯದಲ್ಲಿ ಅನುಸರಿಸಬೇಕಾದ ರೀತಿ ರಿವಾಜುಗಳನ್ನು ಮೌಗ್ಲಿಯು ಸುಲಭವಾಗಿ ಗ್ರಹಿಸಿದನು. ಇತರರಿಗೆ ತೊಂದರೆ ಆದ ಸಂದರ್ಭದಲ್ಲಿ ಮಾಡಬೇಕಾದ ಉಪಚಾರ; ಸ್ವಸಂರಕ್ಷಣೆಗಾಗಿ ಇತರರ ಸಹಾಯವನ್ನು ಕೋರುವಾಗ ಹೇಳುವ "ಒಂದೇ ರಕ್ತದವರು" ಎಂಬ ಕಾಡಿನ ಮಹಾಮಂತ್ರ—"ದೇವರ ಮಕ್ಕಳು ನಾವೆಲ್ಲಾ...." ಗೀತೆ; ಕಾಡುಪ್ರಾಣಿಗಳ ವಿವಿಧ ನಡೆನುಡಿ, ಸಂಕೇತಗಳು ಇತ್ಯಾದಿ., ಎಲ್ಲವನ್ನೂ ಆಮೂಲಾಗ್ರ ಕಲಿತನು. ಬಾಲೂ ಆದರೋ ತನ್ನ ತಿಳುವಳಿಕೆಯ ಶಕ್ತಿಮೀರಿ ಮೌಗ್ಲಿಗೆ ಪಾಠ ಹೇಳಿತು. ತನಗೆ ಸಾಧ್ಯವಾಗದ ಸಂದರ್ಭದಲ್ಲಿ ಹಾಥಿ (ಆನೆ) ಮೊದಲಾದ ಅನೇಕ ಮಿತ್ರ ಪ್ರಾಣಿಗಳ ಸಹಾಯವನ್ನು ಪಡೆಯಿತು. ಈ ಎಲ್ಲಾ ಕಲಿಕೆಯಿಂದ ಮೌಗ್ಲಿಯು ಕಾಡಿನಲ್ಲಿ ನಿರ್ಭಯನಾಗಿ ಬಾಳುತ್ತಾನೆ ಎಂದು ಹಿಗ್ಗಿತು.

ಪಾಠವನ್ನು ಒಪ್ಪಿಸುವ ಮಧ್ಯೆ ಮೌಗ್ಲಿಯು ತಪ್ಪು ಮಾಡಿದರೆ, ಬಾಲೂ ಸವಿನುಡಿಗಳಿಂದ ಮತ್ತೆ ಮತ್ತೆ ತಿಳಿಸುತ್ತಿದ್ದುದಲ್ಲದೆ, ಆಗೊಮ್ಮೆ ಈಗೊಮ್ಮೆ ಮೃದುವಾಗಿ ಶಿಕ್ಷಿಸುತ್ತಿದ್ದಿತು.

ಬಘೀರನು ತನ್ನ ಪರ ಇರುತ್ತಾನೆಂದರೆ, ಅದೂ ಸಹ ಬಾಲೂ ಜೊತೆ ಕೈಜೋಡಿಸುತ್ತಿತ್ತು. ಈ ರೀತಿ ಶಿಕ್ಷೆಗೆ ಒಳಗಾದಾಗ ಮೌಗ್ಲಿಗೆ ಅಸಮಾಧಾನವಾಗುತ್ತಿತ್ತು. ಅಂತಹ ವೇಳೆ ಮೌಗ್ಲಿಗೆ ಮತ್ತಷ್ಟು ದುಗುಡವುಂಟಾಗುತ್ತಿತ್ತು. ಆ ರೀತಿ ದುಗುಡಗೊಂಡ ಒಂದು ದಿನ, ಪಾಠ ಮುಗಿದು ಬಾಲು, ಬಘೀರ ವಿಶ್ರಮಿಸುತ್ತಿದ್ದಾರೆ. ಮೌಗ್ಲಿಗೆ ಬಾಲೂ ಮೇಲೆ ಬಹಳ ಕೋಪ ಬಂದಿತ್ತು.



ಕೆಳಗೆ ಆಟ ಆಡುತ್ತಿದ್ದ ಮೌಗ್ಲಿಯು, ಮರವನ್ನು ಹತ್ತಿ ಕುಳಿತನು. ಅದೇ ಸಮಯ ಕಾಯುತ್ತಿದ್ದ ಬಂದರ್‌ಗಳು, ತಮ್ಮ ಸವಿನುಡಿಗಳಿಂದ ಮೌಗ್ಲಿಯನ್ನು ರಮಿಸಿದುವು. ಹೊಗಳಿ ಅಟ್ಟಕ್ಕೇರಿಸಿದುವು. ತಮ್ಮ ಮತ್ತು ಅವನ ಸಮರೂಪದ (ಬಾಲ ಬಿಟ್ಟು) ಬಗ್ಗೆ ಹೇಳಿದುವು. ಒಪ್ಪುವುದಾದರೆ, ಅವನನ್ನು ತಮ್ಮ ನಾಯಕನನ್ನಾಗಿ ಮಾಡಿಕೊಳ್ಳುವುದಾಗಿ ತಿಳಿಸಿದುವು. ಹೀಗಿರುವಾಗ ಬಘೀರನಿಗೆ ಎಚ್ಚರವಾಯಿತು.



ಬಘೀರನು ಎದ್ದಕೂಡಲೇ ಮಂಗಗಳು ಮಾಯವಾದುವು. ಬಘೀರನು ಬಲವಂತದಿಂದ ಮೌಗ್ಲಿಯನ್ನು ಕೆಳಗಿಳಿಸಿದನು. ಹಾಗೆ ಇಳಿದು ಬಂದವನು, ಬಂದರ್‌ಗಳು ತನಗೆ ಹೇಳಿದ ಮಾತುಗಳನ್ನು ಬಘೀರನಿಗೆ ತಿಳಿಸಿದನು. ಬಘೀರನಿಗೆ ಅವನ ಅಜ್ಞಾನದ ಬಗ್ಗೆ ಅನುಕಂಪವುಂಟಾಯಿತು. ಮೌಗ್ಲಿಯನ್ನು ಕುರಿತು "ಮಂಗಗಳು ನಂಬಲಾಗದ ಕಾಡುಪ್ರಾಣಿಗಳು. ಅವುಗಳ ಮನಸ್ಸು ಬಹಳ ಚಂಚಲವಾದುದು. ಒಂದು ಜಾಗವಿಲ್ಲ. ಶಿಸ್ತು, ಸಂಯಮಗಳಿಲ್ಲ. ಬರೀ ಮಾತು ಕುಚೇಷ್ಟೆ ಬಿಟ್ಟರೆ ಏನೂ ಕೆಲಸ ಮಾಡುವುದಿಲ್ಲ. ಸಾಧನೆ ಶೂನ್ಯ. ಸದಾ ಅನಾಯಕತ್ವದ ಸುಳಿಯಲ್ಲಿ, ಮರಗಳ ಮೇಲೆ ಜೀವನ. ಹಾಗಾಗಿ ಕಾಡುಪ್ರಾಣಿಗಳು ಅವುಗಳನ್ನು ಗಮನಿಸುವುದಿಲ್ಲ. ಮೇಲಾಗಿ ಇಂತಹ ಕೀಳು ಸ್ವಭಾವದವರ ಜೊತೆ ಸೇರುವುದಿಲ್ಲ. ಬುದ್ಧಿವಂತನಾದ ನೀನು, ಅವುಗಳೊಡನೆ ಸ್ನೇಹ ಬೆಳೆಸುವುದಿಲ್ಲವೆಂದು ಭಾವಿಸಿರಬೇಕು. ಬಹುಶಃ ಆ ಕಾರಣಕ್ಕಾಗಿಯೇ ಬಾಲೂ ಅವುಗಳ ಬಗ್ಗೆ ಹೇಳಿಲ್ಲವೆಂದು ಕಾಣುತ್ತದೆ. ನೀನು ನೋಡಿದರೆ, ಈಗ ಅವುಗಳ ಜೊತೆ ಸೇರಿ, ಅವುಗಳನ್ನು ಮೆಚ್ಚಿ ನುಡಿಯುತ್ತಿದ್ದೀಯೆ. ನನಗೆ ನಿನ್ನ ಮೇಲೆ ಬಹಳ ಕೋಪ

ಬರುತ್ತಿದೆ. ನೀನು ವಿವೇಕಶೂನ್ಯ" ಎಂದು ಹೇಳಿದನು. ಇದೆಲ್ಲವನ್ನೂ ಹೊಂಚು ಹಾಕಿ ಕೇಳಿಸಿಕೊಳ್ಳುತ್ತಿದ್ದ ಮಂಗಗಳು, ಕೊಂಬೆಗಳನ್ನಲ್ಲಾಡಿಸಿ, ಬಾಲೂ, ಬಘೀರರ ಮೇಲೆ ಕಾಯಿ ಉದುರಿಸಿದುವು. ಬಾಲೂ, ಬಘೀರರು ಎಚ್ಚೆತ್ತರು. ಮೌಗ್ಲಿಯನ್ನು ಗಮನಿಸಿದರು. ವಿಷಯವನ್ನು ಗ್ರಹಿಸಿದರು. ತಮ್ಮನ್ನು ಹಂಗಿಸುತ್ತಿದ್ದ ಮಂಗಗಳನ್ನು ಕಡೆಗಣಿಸಿ, ಮೌಗ್ಲಿಯನ್ನು ಮಧ್ಯೆ ಹಾಕಿಕೊಂಡು, ಬೇರೆಡೆಗೆ ಹೊರಟುವು.

ಹಾಗೆ ಹೊರಟಿದ್ದನ್ನು ಕಂಡು, ಎರಡು ಗಡವ ಮಂಗಗಳು ಹಠಾತ್ ಕೆಳಗೆ ಬಂದು, ಥಂಗನೆ ಮೌಗ್ಲಿಯ ಮೇಲೆ ಹಾಯ್ದವು. ಅವನನ್ನು ಅನಾಮತ್ತು ಮೇಲೆತ್ತಿ, ಪುನಃ ಮರದ ಮೇಲಕ್ಕೆ ನೆಗೆದುವು. ಮರದಿಂದ ಮರಕ್ಕೆ ಅವನನ್ನು ಎಸೆಯುತ್ತಾ, ಹಿಡಿಯುತ್ತಾ ಮಾಯವಾದುವು. ಉಳಿದ ಮಂಗಗಳೂ ಮಹಾಸಾಧನೆ ಮಾಡಿದಂತೆ ಹಾರುತ್ತಾ, ನೆಗೆಯುತ್ತಾ, ಅರಚುತ್ತಾ, ಕಾಡುಪ್ರಾಣಿಗಳು ತಮ್ಮ ಪರಾಕ್ರಮವನ್ನು ಗಮನಿಸುವಂತೆ ಕಿರುಚಾಡುತ್ತ ಗುಂಪುಕಟ್ಟಿ ಹಿಂಬಾಲಿಸಿದುವು.



ಬಘೀರನು ಮರವೇರುವ ಮೊದಲೇ, ಅವು ತುದಿಮುಟ್ಟಿ ಮೌಗ್ಲಿಯೊಡನೆ ಮತ್ತೊಂದು ಮರಕ್ಕೆ ಹಾರಿದ್ದುವು. ಮೌಗ್ಲಿಗೂ ಭಯವುಂಟಾಯಿತು. ನಿಮಿಷಾರ್ಧದಲ್ಲಿ ಮೇಲೆ, ಮತ್ತೆ ಕೆಳಗೆ ಉಯ್ಯಾಲೆಯಂತೆ ದೇಹ ಊಗುತ್ತಿದೆ. ಯಾರಿಗಾದರೂ ಕೂಗಿ ಹೇಳೋಣವೆಂದರೆ, ಆಕಾಶ, ನೆಲ ಏನೂ ಕಾಣದು. ಎಲ್ಲವೂ ಎಲೆಗಳ ಮಯ. ಒಂದೇ ಮರ ಮರ, ರೊಯ್ ಶಬ್ದ. ಒಂದು ಕ್ಷಣ ದೇಹದ ಹಿಡಿತ. ಮತ್ತೊಂದು ಕ್ಷಣ ಹಿಡಿತವಿಲ್ಲದೆ ತೇಲುವ ದೇಹ, ಎಲ್ಲವೂ ಅಯೋಮಯ. ಎಲ್ಲಿ ಕೆಳಕ್ಕೆ ಎತ್ತಿ ಹಾಕಿ ಸಾಯಿಸಿಬಿಡುತ್ತಾರೋ ಎಂಬ ಪ್ರಾಣಭಯ. ಮಂಗಗಳ ಮೇಲೆ ಕೋಪ ಉಕ್ಕಿತು. "ಕೋಪ ಮಾಡಿ ಕೆಡುವುದಕ್ಕಿಂತಲೂ, ಶಾಂತವಾಗಿ



ಯೋಚಿಸುವುದು ಮೇಲು" ಎಂಬ ಪಾಠ ನೆನಪಿಗೆ ಬಂತು. ಯೋಚನೆ ಮಾಡಲು ಉಪಕ್ರಮಿಸುತ್ತಿದ್ದಂತೆ, ಆಗಸದಲ್ಲಿ "ಚೀಲ್" ಹಕ್ಕಿಯು ಆಹಾರ ಹುಡುಕುತ್ತಾ ತೇಲುತ್ತಿರುವುದು ಎಲೆಗಳ ಮಧ್ಯೆ ಕಂಡಂತೆ ಮರೆಯಾಯಿತು. ಅದೇ ಸಮಯಕ್ಕೆ "ಚೀಲ್"ನ ಸೂಕ್ಷ್ಮದೃಷ್ಟಿ ಬಿದ್ದು, ಮಂಗಗಳ ಕೈಯಲ್ಲಿ ಆಹಾರವಿರ ಬೇಕೆಂದು ಊಹಿಸಿ, ಕೆಳಕ್ಕೆ ಬಂತು. ಕೂಡಲೇ ಮೌಗ್ಲಿಯು "ದೇವರ ಮಕ್ಕಳು" ಹಾಡಿ, ಸಹಾಯವನ್ನು ಕೋರಿದನು.

ಬಾಲೂ, ಬಘೀರರಿಗೆ ತಿಳಿಸಲು ಪ್ರಾರ್ಥಿಸಿದನು. ಚೀಲ್ ಆದರೋ, ಅದೇ ಮೊದಲ ಬಾರಿಗೆ ಮೌಗ್ಲಿಯ ಪರಿಚಯ ವಾಯಿತಾದರೂ. ದೊಡ್ಡ ಮನಸ್ಸು ಮಾಡಿ, ಹಾಗೆಯೇ ಮಾಡುವು ದಾಗಿಯೂ, ಅವನನ್ನು ಮಂಗಗಳು ಕೊಂಡೊಯ್ಯುತ್ತಿರುವ ಮಾರ್ಗವನ್ನು ಸೂಚಿಸುವುದಾಗಿಯೂ ಸಮ್ಮತಿಸಿ ಹೇಳಿತು. ಚಪಲಚಿತ್ತದ ಮಂಗಗಳು ಮಾಡುತ್ತಿರುವ ಅಪಾಯಕಾರೀ ಕೆಲಸವನ್ನೂ, ಅವು ಚಲಿಸುತ್ತಿರುವ ದಿಕ್ಕನ್ನೂ ಗಮನಿಸಿತು. ಅದು ಹಾಗೆಯೇ ಬಾಲು, ಬಘೀರರಿಗೆ ತಿಳಿಸಿತು.

ಈ ಕಡೆ ಬಘೀರನು ಬಾಲೂವನ್ನು ತರಾಟೆಗೆ ತೆಗೆದುಕೊಂಡನು. ಮಂಗಗಳ ಸ್ನೇಹ ಮಾಡುವ ಅಪಾಯದ ಬಗ್ಗೆ ಏಕೆ ತಿಳಿಸಲಿಲ್ಲವೆಂದು ಆಕ್ಷೇಪಿಸಿದನು. ಬಾಲೂ ತನ್ನನ್ನು ತಾನು ಶಪಿಸಿಕೊಳ್ಳುತ್ತಾ, ಮೌಗ್ಲಿಗೇನಾಗುವುದೋ ಎಂಬ ಆತಂಕದಿಂದ ಅಳುವುದಕ್ಕೆ ಉಪಕ್ರಮಿಸಿತು. "ಅಳು ಕೋಪಗಳು ಈ ಸಮಯದಲ್ಲಿ ತರವಲ್ಲ ವೆಂದೂ, ಏನು ಮಾಡಬಹುದು ಎಂಬ ಉಪಾಯ ಸೂಚಿಸಿದರೆ, ತಾನು ಹಾಗೆ ಮಾಡುತ್ತೇನೆ" ಎಂದೂ ಬಘೀರ ಹೇಳಿತು.

"ಅದರದರ ಭಯ ಅದಕ್ಕದಕ್ಕೆ" ಎಂಬ ಹಾಥಿಯ ವಿವೇಕದ ಮಾತು ನೆನಪಿಗೆ ಬಂದು, ಬಾಲೂ ಹೇಳಿತು. ಬಂದರ್‌ಗಳು "ಕಾ" ಹೆಬ್ಬಾವಿಗೆ ಮಾತ್ರ ಹೆದರುತ್ತವೆ. ಆ ಕಾರಣ ನಾವು "ಕಾ"ನ ಸಹಾಯವನ್ನು ಪಡೆದರೆ, ಮೌಗ್ಲಿಯನ್ನು ರಕ್ಷಿಸಿದಂತೆ, ಎಂದಿತು.



ಕೂಡಲೇ ಬಾಲೂ, ಬಘೀರರು "ಕಾ" ಬಳಿಗೆ ಹೋದರು. 'ಕಾ' ಆದರೋ ಆಗ ತಾನೇ ಪೊರೆ ಬಿಟ್ಟು, ಹಸಿವಿನಿಂದ ಕಂಗಾಲಾಗಿತ್ತು. ಬಾಲೂ ಬಘೀರರು ವಿಷಯವನ್ನು ತಿಳಿಸಿದರು. 'ಕಾ' ಬಗ್ಗೆ, ಮಂಗಗಳು ಅವಹೇಳನಕಾರಿಯಾಗಿ ಮಾತನಾಡಿದುದಾಗಿ ಹೇಳಿದರು. "ಕಾಲಿಲ್ಲದ ಹುಳು, ಕುರುಡುಹಾವು, ಎರೆಹುಳುವಾದರೂ ಮೇಲು" ಎಂದು ಜರಿದುದಾಗಿ ತಿಳಿಸಿದರು. "ನೀನೆಲ್ಲಿ? ಅವುಗಳ ಉದ್ಧಟತನವೆಲ್ಲಿ? ಅವು ನಿನ್ನನ್ನು ಗೇಲಿ ಮಾಡೋಣವೆಂದರೇನು?" ಎಂದು, ಕೆಣಕಿ, ಕೆರಳಿಸಿದುವು. ಮೌಗ್ಲಿಯ ಕುಶಲತೆಯ ಬಗ್ಗೆ ತಲೆಕೆಡಿಸಿಕೊಂಡಿರುವ ಬಾಲೂವಿನ ದೈನ್ಯತೆಯನ್ನು ಸಹಿಸಲಾಗದ ಬಘೀರನು 'ಮಂಗಗಳು ಮೌಗ್ಲಿಯನ್ನು ಅಪಹರಣ ಮಾಡಿರುವುದಾಗಿಯೂ, ಕೂಡಲೇ ಅವನನ್ನು ರಕ್ಷಿಸಬೇಕಾಗಿದೆ' ಎಂದೂ 'ಕಾ'ಗೆ ತಿಳಿಸಿದನು. ಆದರೆ ಮೌಗ್ಲಿಯು ಎಲ್ಲಿದ್ದಾನೆಂದು ಹೇಗೆ ಹೇಳುವುದು (ತಿಳಿದಿದ್ದರೆ ತಾನೆ) ಎಂದು ಪೇಚಾಡಿಕೊಳ್ಳುವ ಸಮಯಕ್ಕೆ ಸರಿಯಾಗಿ, "ಚೀಲ್" ಅಲ್ಲಿಗೆ ಬಂದಿತು. ಮಂಗಗಳು ಮೌಗ್ಲಿಯನ್ನು ಅಪಹರಿಸಿಕೊಂಡು, ಪಶ್ಚಿಮದಿಕ್ಕಿನಲ್ಲಿರುವ "ಶೀತಗೃಹ" (ಕೋಲ್ಡ್ ಲೇರ್) ಕೊಂಡೊಯ್ದಿರುವುದಾಗಿಯೂ, ರಾತ್ರಿಯ ವೇಳೆ ಕಾವಲಿರಲು "ಮಾಂಗ್" (ಬಾವುಲಿ)ಗೆ ತಿಳಿಸಿರುವುದಾಗಿಯೂ ಹೇಳಿತು. "ಎಂತಹ ಸಿಹಿಸುದ್ದಿಯನ್ನು ತಂದಿದ್ದೀಯೆ" ಎಂದು ಹೇಳಿ, ಬಾಲೂ ಬಘೀರರು, "ಚೀಲ್"ಗೆ ಧನ್ಯವಾದ ಹೇಳಿದುವು.

ತಾನು ಕಲಿಸಿದ "ದೇವರ ಮಕ್ಕಳು...." ಪಾಠವನ್ನು ಮರೆಯದೆ, ಮೌಗ್ಲಿಯು ಸದುಪಯೋಗ ಮಾಡಿಕೊಂಡ ಬಗ್ಗೆ ಬಾಲೂಗೆ ಸಂತೋಷವಾಯಿತು. ಇದು

ಸಂತೋಷದಿಂದ ಕೂಡುವ ಕಾಲವಲ್ಲ, ಮೌಗ್ಲಿಯು ಕೈಗೆ ಸಿಗುವವರೆಗೆ ಕೂಡುವಂತಿಲ್ಲ ಎಂದು ಬಘೀರನು ಅವಸರಪಡಿಸಿದನು. ಶೀತಗೃಹವು ಕಾಡಿನ ಎಲ್ಲಾ ಪ್ರಾಣಿಗಳಿಗೂ ತಿಳಿದಿತ್ತಾದರೂ, ಮಂಗಗಳ ಹೊರತು, ಬೇರಾವ ಪ್ರಾಣಿಗಳೂ ಅಲ್ಲಿಗೆ ಹೋಗುತ್ತಿರಲಿಲ್ಲ. ವರ್ಷಗಳ ಹಿಂದೆ ಶೀತಗೃಹದಲ್ಲಿ ಮನುಷ್ಯರು ವಾಸಮಾಡುತ್ತಿದ್ದರು. ಅದೊಂದು ಪಾಳು ಬಿದ್ದ ಅರಮನೆ. ಜೀವಕಳೆ ತುಂಬಿ, ಪ್ರಕಾಶಮಾನವಾಗಿದ್ದ ಆ ಪ್ರದೇಶವು ಇಂದು ಹಾಳುಗೆಡವಿದ, ಅಂಧಕಾರ ದಿಂದ ಕೂಡಿದ, ಹಳ್ಳದಿಣ್ಣೆಗಳಾಗಿ, ಕಾಡು ಬೆಳೆದ ಶೀತಗೃಹವಾಗಿ ಬದಲಾಗಿದೆ. ಹಾವು ಚೇಳು ಮುಂತಾದ ನಿಶಾಚರ ಪ್ರಾಣಿಗಳನ್ನು ಬಿಟ್ಟರೆ ಬೇರೆ ಜೀವಗಳು ಅಲ್ಲಿಲ್ಲ. ಬರಗಾಲವು ತೀಕ್ಷ್ಣವಾದಾಗ ಮಾತ್ರ ಅಲ್ಲಲ್ಲಿ ಒಸರಬಹುದಾದ ನೀರಿಗಾಗಿ, ಆಗೊಂದು, ಈಗೊಂದು ಪ್ರಾಣಿ ಅಲ್ಲಿಗೆ ಹೋಗುವುದುಂಟು.

ಭಾರ ಮೈಯಿನ ಬಾಲೂ ನಿಧಾನವಾಗಿ, ಸಾವಕಾಶವಾಗಿ, ನಡೆದುಹೋದರೆ, "ಬಘೀರ"ನೂ, "ಕಾ"ನೂ, ನೀರಿನಂತೆ ಹರಿಯುತ್ತಾ, ಬೆಂಕಿಯಂತೆ ನೆಗೆಯುತ್ತಾ, ವೇಗವಾಗಿ ಹೊರಟುವು. ಶೀತಲಗೃಹದ ಕೋಟೆ ಪ್ರದೇಶವನ್ನು ಸೇರುವ ಹೊತ್ತಿಗೆ, ಸಮರಾತ್ರಿ ಆಗಿತ್ತು. ಎಲ್ಲಂದರಲ್ಲಿ ನುಗ್ಗಿ ಬಘೀರನೂ, ಪಶ್ಚಿಮದಿಕ್ಕಿನಿಂದ 'ಕಾ'ನೂ, ಮಂಗಗಳ ಮೇಲೆ ಮುಗಿಬೀಳಲು ನಿಶ್ಚಯಿಸಿಕೊಂಡು, ಹೊರಟುವು.



ಈಗ ಮಂಗಗಳ ಕಡೆ ಬರೋಣ. ಮೌಗ್ಲಿಯನ್ನು ಅಪಹರಿಸಿ, ಸಾಗಿಸಿಕೊಂಡು ಬಂದ ಮಂಗಗಳು, ಮೌಗ್ಲಿ ಯನ್ನು ಸುತ್ತುವರೆದು, ತಮ್ಮನ್ನು ತಾವು ಹೊಗಳಿ ಕೊಳ್ಳುತ್ತಾ, ತಮ್ಮ ಪರಾಕ್ರಮ ವನ್ನು ಹೇಳಿಕೊಳ್ಳುತ್ತಾ, ಮೌಗ್ಲಿಯು ಹಸಿವೆ ಎಂದು ಹೇಳಿದರೂ, ಆ ಬಗ್ಗೆ ಗಮನ ಕೊಡದೆ, ಮೈಮರೆತು, ಹಾಡುತ್ತಾ, ಕುಣಿದು ಕುಪ್ಪಳಿ ಸುತ್ತಾ ಇದ್ದುವು. ಕೆಲವು ಮಂಗಗಳು ನಮಗೆ ಗುಡಿಸಲು ಕಟ್ಟಲು ಕಲಿಸಿದರೆ, ನಿನ್ನನ್ನು ರಾಜನನ್ನಾಗಿ ಮಾಡುತ್ತೇವೆ, ಎಂದು ಹೇಳಿ ಹುಚ್ಚುಹುಚ್ಚಾಗಿ ಕುಣಿಯುತ್ತಿದ್ದುವು. ಆಗ, ಬಾಲೂ ಹೇಳಿದ್ದು ನಿಜವಿರಬೇಕು. ತಬಾಕಿಯು ಕಚ್ಚಿ ಈ ಮಂಗಗಳಿಗೆ ಹುಚ್ಚು ಹಿಡಿದಿರಬೇಕೆಂದು ಮೌಗ್ಲಿಗನ್ನಿಸಿತು. ಆ ಹೊತ್ತಿಗೆ ಮೋಡವು ಮುಚ್ಚಿ, ತಿಂಗಳ ಬೆಳಕು ಮರೆಯಾಯಿತು. ಕೂಡಲೇ ಬಘೀರನು ಮಂಗಗಳ ಮೇಲೆ ಎರಗಿದನು.

ತಡಮಾಡದೆ ಮಂಗಗಳು ಮೌಗ್ಲಿಯನ್ನೆತ್ತಿಕೊಂಡು ಹೋಗಿ ಮೇಲ್ ಛಾವಣಿಯು ಕುಸಿದಿದ್ದ, ನೆಲಮಾಳಿಗೆಯ ಕೊಠಡಿಯೊಳಕ್ಕೆ ಎತ್ತಿಹಾಕಿದುವು. ಆ ಕೊಠಡಿಯೊಳಗೆ ಹಾವು, ಚೇಳು, ಮಂಡರಕಪ್ಪೆ ಮುಂತಾದ ಪ್ರಾಣಿಗಳು ವಾಸವಾಗಿದ್ದುವು. ಮೌಗ್ಲಿಯು "ದೇವರ ಮಕ್ಕಳು" ಹಾಡನ್ನು ಹೇಳಿ ತನ್ನನ್ನು ತಾನು ರಕ್ಷಣೆ ಮಾಡಿಕೊಂಡನು.

ಒಂಟಿಯಾಗಿ ಬಘೀರನೂ, ಆ ವೇಳೆಗೆ ಅಲ್ಲಿಗೆ ಬಂದ ಬಾಲೂವೂ, ಮುಗಿಬಿದ್ದ ಮಂಗಗಳೊಡನೆ ಕಾದಾಡಹತ್ತಿದುವು. "ಮಾಂಗ್" ಬಿತ್ತರಿಸುತ್ತಿದ್ದ ಸುದ್ದಿಯನ್ನು ಕೇಳಿ, ಇನ್ನಷ್ಟು, ಮತ್ತಷ್ಟು ಮಂಗಗಳು, ಬಾಲೂ, ಬಘೀರರ ಮೇಲೆ ಮುಗಿಬಿದ್ದುವು. ಮೈಯೆಲ್ಲಾ ಗಾಯವಾಗಿ, ಶಕ್ತಿಕುಂದಿ, ಬಘೀರನು ಬಳಲುತ್ತಿರುವಾಗ, ಮೌಗ್ಲಿಯ ಕೂಗನ್ನು ಕೇಳಿಸಿಕೊಂಡು, ಪಕ್ಕದಲ್ಲೇ ಇದ್ದ ಕೊಳವನ್ನು ಹೊಕ್ಕನು. ಮಂಗಗಳು ಅಲ್ಲಿಗೂ ಬೆನ್ನಟ್ಟಿದಾಗ, ಅಭಿಮಾನವನ್ನು ಬಿಟ್ಟು, 'ಕಾ'ನನ್ನು ಸಹಾಯಕ್ಕೆ ಕರೆದನು.



"ಕಾ" ಆ ಹೊತ್ತಿಗೆ ಸರಿಯಾಗಿ ಆ ಜಾಗಕ್ಕೆ ಬಂದಿತು. ಬಲವಾಗಿ ಬುಸುಗುಟ್ಟಿತು. ಎಲ್ಲಾ ಮಂಗಗಳೂ ಭಯದಿಂದ, ಸಮ್ಮೋಹಿತವಾದಂತೆ, ನಿಶ್ಚೇಷ್ಟಿತ ವಾಗಿ, ಕದಲದೆ ನಿಂತುಬಿಟ್ಟವು. ಆಗ 'ಕಾ' ಅತ್ತಿತ್ತ ನೋಡಿ, ಮೌಗ್ಲಿ ಇದ್ದ ನೆಲಮಾಳಿಗೆಯ ಕೊಠಡಿಯನ್ನು ಗುರುತಿಸಿ, ಗೋಡೆಯನ್ನು ಒಡೆದು, ಮೌಗ್ಲಿಯನ್ನು ರಕ್ಷಿಸಿತು. ಬಾಲೂ, ಬಘೀರರ ಆಣತಿಯಂತೆ, ಮೌಗ್ಲಿಯು "ಕಾ"ಗೆ ಧನ್ಯವಾದ ಹೇಳಿ, ಸ್ತುತಿಸಿ, ವಂದಿಸಿದನು. ಅವಕಾಶವೊದಗಿದಾಗ, 'ಕಾ'ಗೆ ತಾನೂ ಸಹ ಸಹಾಯಮಾಡುವುದಾಗಿ ಹೇಳಿದನು. "ಕಾ" ಸಹ ಕೆಚ್ಚೆದೆಯ, ಸವಿನುಡಿಯ ಮೌಗ್ಲಿಯನ್ನು ಸದಾ ಸಂರಕ್ಷಿಸುವುದಾಗಿ ಆಶ್ವಾಸನೆ ನೀಡಿ, ಆಶೀರ್ವದಿಸಿತು. ಚಂದ್ರನು ಮುಳುಗುತ್ತಿರುವುದರಿಂದ ಮೌಗ್ಲಿಯು ಹೊರಟು, ವಿಶ್ರಮಿಸಬೇಕೆಂದೂ, ಅಲ್ಲಿಂದ ಮುಂದೆ ನಡೆಯುವ, ತಾನು ಮಾಡಲಿರುವ ಕೆಲಸವನ್ನು ಮೌಗ್ಲಿಯು ನೋಡಬಾರದೆಂದೂ ಹೇಳಿತು.



ಮಂಗಗಳಂತೆಯೇ ಬಾಲೂ, ಬಘೀರರು ಸಹ ಮಂತ್ರಮುಗ್ಧರಾಗಿ ನಿಂತಿದ್ದರು. ಮೌಗ್ಲಿಯು ಅವರನ್ನು ಎಚ್ಚರಿಸಿದನು. ತನ್ನ ಅವಿವೇಕಕ್ಕೆ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿದನು. ಕಾಡಿನ ನಿಯಮದಂತೆ, ಬಘೀರನು ನೀಡಿದ ಲಘು ಶಿಕ್ಷೆಯನ್ನು ಎದುರಾಡದೆ ಸ್ವೀಕರಿಸಿದನು. ಆಯಾಸಗೊಂಡಿದ್ದ ಅವನನ್ನು, ಬಘೀರನು ತನ್ನ ಬೆನ್ನ ಮೇಲೆ ಮಲಗಿಸಿಕೊಂಡು, ತೋಳರಾಯನ ಗವಿಗೆ ಕರೆತಂದು, ರಕ್ಷಾ ಬಳಿ ಮಲಗಿಸಿದನು.

**ಈ ಭಾಗದಲ್ಲಿ ಅಭಿನಯಗಳು 2, 3 ಮತ್ತು 4 ಬರುತ್ತವೆ.**

ಅಭಿನಯ 2 — **ಬಾಲೂ** : ಮರಿಗಳ ನಿಯಮವನ್ನು ಹೆಮ್ಮೆಯಿಂದ ಅಭಿನಯಿಸುವುದು.

ಅಭಿನಯ 3 — **ಬಘೀರ** : ಬೇಟೆ ಆಡುವ ದೃಶ್ಯ. ನಿಶ್ಶಬ್ದವಾಗಿ ಅಭಿನಯಿಸುವುದು.

ಅಭಿನಯ 4 — **"ಕಾ"** : ಈ ಅಭಿನಯದಲ್ಲಿ ಮರಿಗಳೆಲ್ಲರೂ "ಕಾ"ನ ದೇಹದ ಭಾಗಗಳು. ಸದ್ದು ಮಾಡದೆ, ಒಬ್ಬರಿಗೊಬ್ಬರು, ಕೈಬಿಡದೆ ಜೊತೆಗೂಡಿ ನಡೆಯುವುದನ್ನೂ, ಶಿಸ್ತು ಒಗ್ಗಟ್ಟನ್ನೂ ಕಲಿಯುತ್ತಾರೆ. ಆದೇಶ ಬಂದಾಗ ಎಲ್ಲರೂ ಮಂಗಗಳಾಗಿ ಕೂಗಾಟ, ಕಪಿಚೇಷ್ಟೆಗಳಲ್ಲಿ ತೊಡಗುತ್ತಾರೆ. ಮತ್ತೆ ಎಲ್ಲರೂ ಶಿಸ್ತಿನಿಂದ 'ಕಾ'ನ ದೇಹದ ಭಾಗವಾಗುತ್ತಾರೆ.

ವಿವರಗಳಿಗೆ ಅಧ್ಯಾಯ—2 ನೋಡಿ.

# ನಿಮ್ಮ ಬಾಲವೂ ಹಿಂದಿದೆ ಕೇಳಿ



ಬಾವುಟದಂತೆ ಬಾಲವ ಬೀಸುತ। ಚೆಂಡಿನ ರೀತಿ ಜೋಲುತ ನೆಗೆವೆವು।
ನಮ್ಮೀ ಆಟವ ನೋಡಲು ಬನ್ನಿ। ನಮ್ಮೀ ಕೂಟಕೆ ಓಡುತ ಬನ್ನಿ।
ನಮಗಿರುವಂತೆ ನಿಮಗೂ ಬಾಲ। ಕೋಪತಾಪವ ಮಾಡದೆ ನೋಡಿ।
ಕಾಮನಬಿಲ್ಲಿನ ರೀತಿಯಲಿ। ನಿಮ್ಮ ಬಾಲವೂ ಹಿಂದಿದೆ ಕೇಳಿ॥

ಕೊಂಬೆಯ ಮೇಲೆ ಸಾಲಾಗಿ ಕುಳಿತು। ಮೇಲಾದ ಯೋಚನೆ ಮಾಡುವೆವು।
ಚೆಂದದ ವಸ್ತುವ, ಕ್ಷಣ ಮಾತ್ರದಲಿ। ವಿಧವಿಧ ಮಾದರಿ ಮಾಡುವೆವು।
ವಿಧ ವಿಧ ವಿಧ ವಿಧ ಸೊಗಸಿನ ಕೃತಿಗಳ। ಕೋರಿ ಪಡೆಯಿರಿ ಬನ್ನಿ।
ನಿಮಗಿದು ತಿಳಿದಿರಲಿ। ನಿಮ್ಮ ಬಾಲವೂ ಹಿಂದಿದೆ ಕೇಳಿ॥

ಹಕ್ಕಿ ಪಕ್ಷಿ ಪ್ರಾಣಿಗಳ, ಬಾವುಲಿ, ಜಲಚರ ಜೀವಿಗಳೆಲ್ಲದರ।
ಮಿಕ್ಕವರೆಲ್ಲರ ಕೇಳಿಹೆವು, ಎಲ್ಲರ ಎಲ್ಲಾ ಮಾತುಗಳ ನಾವ್ ಹಾಡುವೆವು।
ಕೇಳಿರಿ, ನಲಿಯಿರಿ, ಭಾಪುರೇ, ಭಲರೇ। ಮಾನವ ಸಮರು ನಾವಲ್ವೇ।
ತಿಳಿಯಿರಿ ನೀವು, ನಟಿಪೆವು ನಾವು। ನಿಮ್ಮ ಬಾಲವೂ ಹಿಂದಿದೆ ಕೇಳಿ॥

ಆದರೆ ಬನ್ನಿ, ನಮ್ಮನು ಸೇರಿ। ತೇಗದ ಮರವೇರಿ।
ಕಾಡಿನ ಬಳ್ಳಿಯ ಹಿಡಿಯುತ ಏರಿ। ಕೊಂಬೆ ಕೊಂಬೆಗೂ ಹಾರುತಿರಿ।
ಎಲೆಗಳ ರಾಶಿಯ ಹಿಂದೆ ಬಿಡಿ। ಮುಂದೆ ನೋಡಿರಿ, ಮಾಡಿರಿ ಘೋಷ।
ಅದ್ಭುತ ಕೃತಿಗಳ ಮಾಡುತ, ಖಂಡಿತ ಪಡುವೆವು ಸಂತೋಷ॥
ಮಂಗಗಳ ರೀತಿಯೇ ಹೀಗೇಳಿ। ನಿಮ್ಮ ಬಾಲವೂ ಹಿಂದಿದೆ ಕೇಳಿ॥
ಮಂಗಗಳ ರೀತಿಯೇ ಹೀಗೇಳಿ। ನಿಮ್ಮ ಬಾಲವೂ ಹಿಂದಿದೆ ಕೇಳಿ॥

## ಪ್ರಸಂಗ 3

# ಮೌಗ್ಲಿಯ ಬೇಟೆ ಮತ್ತು ಶಪಥ ಸಾಧನೆ

ಸಭಾ ವೇದಿಕೆಯ ಬಳಿ ಹಿಂಡಿನಲ್ಲಿ ಜಗಳವಾಯಿತಷ್ಟೆ. ಆಗ ಮೌಗ್ಲಿಯು ಬೆಂಕಿಯನ್ನು ಹರಡಿ ಗಲಭೆಕೋರರ ಬಾಯ್ಮುಚ್ಚಿಸಿದ್ದೂ; ಉರಿಯುವ ಕೊರಡಿನಿಂದ ಷೇರ್‌ಖಾನನನ್ನು ಬಡಿದೋಡಿಸಿದ್ದೂ; ಕಾಡುಬಿಟ್ಟು ಊರು ಸೇರಲು ಹೊರಟಿದ್ದೂ; ವಿದಾಯ ಹೇಳಿದ್ದೂ; ಮತ್ತೆ ಬಾರೆಂದು ಮಿತ್ರರು ನೀಡಿದ ಕೋರಿಕೆಗೆ ಮೌಗ್ಲಿಯು ತನ್ನ ಶಪಥವನ್ನು ತಿಳಿಸಿದ್ದೂ ನೆನಪಿದೆಯಷ್ಟೆ! ಅವನ ಶಪಥವೇನು? "ಮತ್ತೆ ಬರುವಾಗ ಷೇರ್‌ಖಾನನನ್ನು ಕೊಂದು ಅವನ ಚರ್ಮವನ್ನು ಸುಲಿದು ತಂದು, ಅದನ್ನು ಸಭಾವೇದಿಕೆಯ ಮೇಲೆ ಹರಡುವುದು; ಹಾಗೆ ಹರಡಿದ ಚರ್ಮದ ಮೇಲೆ ಅಕೇಲರನ್ನು ಕೂಡಿಸುವುದು ಮತ್ತು ತಾನು ಆನಂದನರ್ತನ ಮಾಡುವುದು."

ಹಾಗೆ ಹೊರಟ ಮೌಗ್ಲಿಯು, ಮೂವ್ವತ್ತೆರಡು ಕಿ. ಮೀ. ದೂರದ ಕಂಡರಿಯದ, ಪರಿಚಯವಿಲ್ಲದ ಹಳ್ಳಿಗೆ ಬಂದನು. ಊರಾಚಿನ ಬಯಲಿನಲ್ಲಿ ದನಕಾಯುತ್ತಿದ್ದ ಹುಡುಗರು ಇವನನ್ನು ಕಂಡು ಬೆದರಿ, ಓಡಿದರು. ಊರ ಬಾಗಿಲ ಬಳಿಯ, ಪೊದೆ ಗಿಡಗಳ ಮಧ್ಯೆ ನಿಂತು, ಆ ಕಡೆ ಬಳಸಿ ಬಂದ ಹಳ್ಳಿಗನಿಗೆ ಸಂಜ್ಞೆ ಮಾಡಿ, ತನಗೆ ಹಸಿವಾಗಿದೆ ಎಂದೂ, ತಿನ್ನಲು ಆಹಾರ ಬೇಕೆಂದೂ ತಿಳಿಸಿದನು. ಅವನೂ ಸಹ ಈ ಕಾಡು ಹುಡುಗನನ್ನು ಕಂಡು ಬೆದರಿದನು. ಓಡಿ ಹೋಗಿ ಊರ ಭಟ್ಟರಿಗೆ ವಿಷಯ ತಿಳಿಸಿದನು. ಈ ಕಾಡು ಬಾಲಕನನ್ನು ನೋಡಲು ಭಟ್ಟರ ಜೊತೆ ಒಂದು ಹಿಂಡು ಜನರೇ ಬಂದರು. ಜನರ ಈ ನಡೆವಳಿಕೆಯು ಮೌಗ್ಲಿಗೆ ಅಸಹ್ಯವೆನಿಸಿತು. ಆ ವೇಳೆಗೆ ಊರು ಸಾಹುಕಾರನ ಹೆಂಡತಿಯಾಗಿದ್ದ ಮೆಸ್ಸವ್ವಳೂ ಅಲ್ಲಿಗೆ ಬಂದಳು. ಹತ್ತು ಹನ್ನೆರಡು ವರ್ಷಗಳು ಹಿಂದೆ ಹುಲಿಯು ಕದ್ದೊಯ್ದಿದ್ದ ತನ್ನ ಮಗುವಿನಂತೆಯೇ ಈ ಬಾಲಕನು ಇರುವುದಾಗಿ, ಭಟ್ಟರಿಗೆ ತಿಳಿಸಿದಳು. ಭಟ್ಟರು ಲೆಕ್ಕಾಚಾರ ಮಾಡಿ, ದೇವರು ಕೃಪೆ ಮಾಡಿ ಆ ಬಾಲಕನನ್ನು ಕಳುಹಿಸಿಕೊಟ್ಟಿರುವುದಾಗಿ ಶಾಸ್ತ್ರ ಹೇಳಿದರು. ತಮ್ಮ ಭಾಗಕ್ಕೆ ಸಲ್ಲುವ ದಕ್ಷಿಣೆ ಪಡೆದು ಆಶೀರ್ವಾದ ಮಾಡಿದರು.

ಮೆಸ್ಸವ್ವಳು ತಾನು ಕಳೆದುಕೊಂಡಿದ್ದ "ನಾಥೂ" ಹೆಸರಿನಿಂದಲೇ ಆ ಬಾಲಕನನ್ನು ಸಾಕತೊಡಗಿದಳು. ಮೌಗ್ಲಿಯು, ತಾನು ಮನುಷ್ಯರ ಭಾಷೆಯನ್ನು ಕಲಿಯದಿದ್ದರೆ ಕಷ್ಟವಾಗುವುದೆಂದು ಅರಿತನು. ಮನಸ್ಸು ಗಟ್ಟಿ ಮಾಡಿ ಬೇಗ ಬೇಗ ಮಾತನಾಡುವುದನ್ನು ಕಲಿತನು. ರಾತ್ರಿ ಮಲಗುವಾಗ ಮಾತ್ರ ಅವನ ಅವಸ್ಥೆ ಹೇಳತೀರದು. ಮನೆಯೊಳಗೆ ಮಲಗಲು, ಬೋನಿನೊಳಗೆ ಇರುವಂತೆ ಭಾಸವಾಗಿ,

ಮನೆಯ ಹೊರಗೆ ಅಂಗಳದಲ್ಲಿ ಮಲಗುತ್ತಿದ್ದನು. ಬೂದಣ್ಣನು ಆಗಾಗ ಬಯಲಂಚಿನ, ಬಿದಿರು ಮೆಳೆಯ ಬಳಿ ಬಂದು, ಮೌಗ್ಲಿಯ ಜೊತೆ ಮಾತನಾಡಿ ಹೋಗುತ್ತಿದ್ದನು. ಊಟ, ತಿಂಡಿಗಳ ವಿಷಯದಲ್ಲಿ ಸಹ, ಅವನು ಬಹಳವಾಗಿ ರಾಜಿ ಮಾಡಿಕೊಳ್ಳಬೇಕಾಯಿತು. ಮೂರು ತಿಂಗಳ ಕಾಲ ಮೌಗ್ಲಿಯು ಹಳ್ಳಿಯನ್ನು ಬಿಟ್ಟು ಹೊರಗೆ ಹೋಗಲಿಲ್ಲ. ಹಳ್ಳಿಯ ಬಾಲಕರು ಗೇಲಿ ಮಾಡಿದರೂ, ತಾಳ್ಮೆ ವಹಿಸಿದನು. ಸುಲಲಿತವಾಗಿ ಮಾತನಾಡಲು ಕಲಿತನು. ಮನುಷ್ಯರ ಚರ್ಯೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದನು.



ಜಾತಿಬೇಧವನ್ನು ಕಡೆಗಣಿಸಿ, ಹಳ್ಳಕ್ಕೆ ಬಿದ್ದು ಒದ್ದಾಡುತ್ತಿದ್ದ, ಕುಂಬಾರನ ಕತ್ತೆಯನ್ನು ಮೇಲೆತ್ತಿದನು. ಭಟ್ಟರ ಮಾತಿನಂತೆ ಮೆಸ್ಸವ್ವಳ ಗಂಡನು, ನಾಥೂವನ್ನು ದನ ಕಾಯಲು ನಿಯಮಿಸಿದನು.

ಸಂಜೆಯ ಸಮಯದಲ್ಲಿ ಊರು ಮುಂದಿನ ಅಶ್ವತ್ಥಕಟ್ಟೆಯ ಮೇಲೆ ಕುಳಿತು ಹರಟೆ ಹೊಡೆಯಲು, ಊರಿನ ಗಂಡಸರು ಸೇರುತ್ತಿದ್ದರು. ಅವರಲ್ಲಿ ಬಲದೇವ ಎಂಬ ಬೇಟೆಗಾರನೂ ಒಬ್ಬನು. ತನ್ನ ಸಾಹಸಗಳಿಗೆ ಉಪ್ಪುಕಾರ ಹಚ್ಚಿ ವಿವರಿಸಿ, ಕೇಳುಗರನ್ನು ಬೆರಗುಗೊಳಿಸುತ್ತಿದ್ದನು. ಬಲದೇವನ ಮಾತುಗಳಲ್ಲಿ ಮೂರುಪಾಲು ಸುಳ್ಳು ಎಂಬುದನ್ನು ಮೌಗ್ಲಿಯು ಬಹಳಬೇಗ ಗ್ರಹಿಸಿದನು. ಒಳಗೊಳಗೇ ಬರುತ್ತಿದ್ದ ನಗುವನ್ನು ತಡೆದುಕೊಳ್ಳುತ್ತಿದ್ದನು.

ಪೂರ್ಣದಾಸನೆಂಬ ಕುಂಟು ಲೋಭಿಯು, ಬಲದೇವನ ಮಾತುಗಳಿಗೆ ಪೂರಕವಾಗಿ, ಕಾಡಿನಲ್ಲಿ ಒಂದು ಹುಲಿ ಇರುವುದಾಗಿಯೂ, ಅದಕ್ಕೆ ದೆವ್ವ ಹಿಡಿದಿದೆ ಎಂದೂ, ಆ ಕಾರಣ ಅದು ಕುಂಟುತ್ತದೆಂದೂ ಹೇಳಿದನು. ಈ ಮಾತುಗಳನ್ನು ಕೇಳಿ, ಮೌಗ್ಲಿಯ ತಡೆಯಲಾಗದೆ ಎಲ್ಲರೆದುರಿಗೆ, ಅವನು ಬಡಾಯಿ ಕೊಚ್ಚುತ್ತಿದ್ದಾನೆ, ಅದು ಹುಟ್ಟಿನಿಂದ ಕುಂಟು ಹುಲಿ ಎಂದನು. ಈ ಮಾತು ಕೇಳಿ ಬಲದೇವನಿಗೆ ರೇಗಿತು. "ಹುಲಿ ವಿಷಯ ನಿನಗೇನು ಗೊತ್ತು? ಅಷ್ಟು ತಿಳಿದವನಾದರೆ, ಅದನ್ನು ಕೊಂದು, ಚರ್ಮವನ್ನು ಸುಲಿದು ತಾ. ಸರ್ಕಾರದಿಂದ ನೂರು ರೂಪಾಯಿ ಬಹುಮಾನ ಸಿಗುತ್ತೆ" ಎಂದು ಗದರಿದನು.

ಸರಿ, ದಿನಗಳುರುಳುತ್ತಿದ್ದವು. ದನಗಳನ್ನು ಮೇಯಿಸಲು, ಮೌಗ್ಲಿಯು "ರಾಮ" ಎಂಬ ಕೋಣನ ಮೇಲೆ ಕುಳಿತುಹೋಗುತ್ತಿದ್ದನು.



ಅದೊಂದು ದಿನ ಬಿದಿರು ಮೆಳೆ ಬಳಿ ಇವನಿಗಾಗಿ ಕಾಯುತ್ತಿದ್ದ ಬೂದಣ್ಣನು "ಷೇರ್‌ಖಾನನು ಹೊಸಹೊದಿಕೆ ಬರುವವರೆಗೆ ಬೇರೆ ಕಡೆ ಹೋಗಿರುವುದೆಂದೂ, ಬಂದ ಮೇಲೆ ಮೌಗ್ಲಿಯನ್ನು ಕೊಲ್ಲಲು ಹವಣಿಸುತ್ತಿರುವುದೆಂದೂ" ತಬಾಕಿಯು ಹೇಳಿತೆಂದು ತಿಳಿಸಿದನು. ಮನುಷ್ಯರೊಡನೆ ಸೇರಿರುವುದು ಸಹಜವಾದರೂ, ತೋಳಗಳನ್ನು ಮರೆಯಬಾರದೆಂದೂ, ಎಂದಾದರೊಂದು ದಿನ ಮನುಷ್ಯರು ಅವನನ್ನು ಹೊರಹಾಕುವ ಸಾಧ್ಯತೆ ಇರುವುದಾಗಿ ಹೇಳಿದನು.

ಇದಾದ ಹಲವಾರು ವಾರಗಳ ಬಳಿಕ, ಬೂದಣ್ಣನು ಮತ್ತೆ ಭೇಟಿಮಾಡಿ,

ತಾನು ಕಾತುರದಿಂದ ಕಾದಿರುವುದಾಗಿ ತಿಳಿಸಿದನು. "ಷೇರ್‌ಖಾನನು ವಾಪಸ್ಸಾಗಿದ್ದಾನೆ. ನಿನ್ನನ್ನು ಕೊಲ್ಲಲು ಹೊಂಚುಹಾಕುತ್ತಿದ್ದಾನೆ" ಎಂದು ಹೇಳಿದನು. ಮೌಗ್ಲಿಯು, ನೀವು ನಾಲ್ವರ ಪೈಕಿ ಒಬ್ಬರು ದೂರದ ಬಂಡೆಯ ಮೇಲೆ ಕುಳಿತು ಷೇರ್‌ಖಾನನ ಚಲನವಲನಗಳನ್ನು ಗಮನಿಸಿ. ಅವನು ಹಳ್ಳಿಯ ಬಳಿ ಬಂದರೆ, ನೀವು ನೀರಿನ ಚಿಲುಮೆಯ ಬಳಿ ಇರುವ ಧಾಕ್ ಮರದ ಹತ್ತಿರ ಇರಿ ಎಂದು ಸೂಚಿಸಿದನು.

ಮೌಗ್ಲಿಯು ಇತರ ಬಾಲಕರೊಡನೆ ವಿನೋದವಾಗಿ ಕಾಲಕಳೆಯುತ್ತಾ, ದನಗಳನ್ನು ಮೇಯಿಸುತ್ತಾ ದಿನ ಕಳೆಯುತ್ತಿದ್ದನು. ಊರ ಬಾಗಿಲಿನಿಂದ ಎರಡೂವರೆ ಕಿ.ಮೀ. ದೂರದಲ್ಲಿರುವ ಬಂಡೆಯ ಮೇಲೆ ಬೂದಣ್ಣನು ಕಂಡರೆ, ಷೇರ್‌ಖಾನನು ದೂರದಲ್ಲಿರುವನೆಂದು ತಿಳಿಯುತ್ತಿದ್ದನು. ಹೀಗೆ ಅನೇಕ ದಿನಗಳು ಕಳೆದುವು. ಅದೊಂದು ದಿನ ಬೂದಣ್ಣನು ಕಾಣಲಿಲ್ಲ. ಕೂಡಲೇ ಮೌಗ್ಲಿಯು ದನಗಳನ್ನು ಕಂದರದ ಬಳಿ ಮೇಯಲು ಬಿಟ್ಟು, ಧಾಕ್ ಮರದ ಬಳಿಗೆ ಓಡಿದನು. ಅಲ್ಲಿ ಇವನಿಗಾಗಿ ಕಾದಿದ್ದ ಬೂದಣ್ಣನು, ಅವಸರವಸರವಾಗಿ ಹೀಗೆ ಹೇಳಿದನು. "ಮೌಗ್ಲಿಯು ಮರೆತುಬಿಡಲಿ ಎಂದು ಷೇರ್‌ಖಾನನು ದೂರದಲ್ಲಿದ್ದನು. ಕಳೆದ ರಾತ್ರಿ, ಗುಡ್ಡ ಸಾಲು ದಾಟಿ, ನಿನ್ನನ್ನು ಹುಡುಕಿಕೊಂಡು ತಬಾಕಿಯ ಜೊತೆ ಬರುತ್ತಿದ್ದಾನೆ" ಎಂದು ಹೇಳಿತು. "ಆದಿನ (ಎಂದರೆ ಇಂದು) ರಾತ್ರಿ ಊರ ಬಾಗಿಲ ಬಳಿ ಕಾದಿದ್ದು, ಮೌಗ್ಲಿಯನ್ನು ಹಿಡಿಯಬೇಕು ಎಂದು ಯೋಚಿಸಿದ್ದಾನೆ" ಎಂದು ತಬಾಕಿ ಹೇಳಿದ್ದಾಗಿ ತಿಳಿಸಿತು. ಆದರೆ ಈಗ ತಾನೆ ಕಾಡುಹಂದಿಯನ್ನು ಕೊಂದು ತಿಂದು, ರಕ್ತ ಕುಡಿದು, ಆಲಸ್ಯದಿಂದ ಮತ್ತೇರಿ, ಕಂದರದಲ್ಲಿ ಅಡಗಿ ಮಲಗಿದೆ, ಎಂದು ಸಹ ಬೂದಣ್ಣನು ತಿಳಿಸಿದನು. ಈ ಸುದ್ದಿ ಸಹ ತಬಾಕಿಯಿಂದ ಸಂಗ್ರಹಿಸಿದೆ ಎಂದು ಹೇಳಿದನು.



ಕಷ್ಟದ ಬೇಟೆಯ ಗುರಿಯನ್ನು ಮರೆತು, ಮಿತಿಮೀರಿ ತಿಂದು ಮಲಗಿರುವ ಷೇರ್‌ಖಾನನ ದಡ್ಡತನವನ್ನು ಮೌಗ್ಲಿಯು ಜರಿದನು. ಕೂಡಲೇ ಚುರುಕಾದನು. ಈಗ ದನಗಳ ಮಂದೆಯನ್ನು ಕಂದರಕ್ಕೆ ಒಯ್ದರೆ, ಅವು ಹುಲಿಯ ವಾಸನೆ ಹಿಡಿದು, ಅಲುಗಾಡದೆ ಬಿದ್ದಿರುವ ಅವನನ್ನು ಮೆಟ್ಟಿ ಸಾಯಿಸುತ್ತವೆ ಎಂದು ಯೋಚಿಸಿದನು.

ಆ ಕಡೆ ವಾಸನೆ ಬರದಿರಲೆಂದು, ಷೇರ್‌ಖಾನನು ನದಿಯಲ್ಲಿ ಮಿಂದು ಬಂದಿದ್ದನು. ಮೌಗ್ಲಿಯು ಕೂಡಲೇ ಮಂದೆಯನ್ನು ಇಬ್ಭಾಗ ಮಾಡಿ, ಕಂದರದ ಎರಡೂ ಕಡೆಯಿಂದ ನುಗ್ಗಿಸಲು ಯೋಚಿಸಿ, ತನಗಿನ್ನೂ ಎಮ್ಮೆಗಳ ಭಾಷೆ ಬರದಿರುವುದಕ್ಕಾಗಿ ಚಿಂತಿಸಿ, ಬೂದಣ್ಣನ ಸಹಾಯವನ್ನು ಕೋರಿದನು. ಮೌಗ್ಲಿಯು ಹೇಳಿದ್ದೇ ತಡ ಬೂದಣ್ಣನೂ ಒಡನೆ ಬಂದಿದ್ದ ಅಕೇಲನೂ ಸೇರಿ, ಹಸು ಎಮ್ಮೆ ಕರುಗಳು ಒಂದು ಕಡೆ, ಕೋಣಗಳು ಹೋರಿಗಳು ಒಂದು ಕಡೆ ಇರುವಂತೆ ಇಬ್ಭಾಗ ಮಾಡಿದುವು.



ಮೌಗ್ಲಿಯು ರಾಮನ ಬೆನ್ನೇರಿ ಅಕೇಲನ ಸಹಾಯದಿಂದ, ಕೋಣ ಹೋರಿಗಳ ಗುಂಪನ್ನು ಸುತ್ತು ದಾರಿ ಬಳಸಿ, ಕಂದರದ ಹಿಂಭಾಗಕ್ಕೆ ತಂದನು.

ಈಗ ಬೂದಣ್ಣನು ಎಮ್ಮೆ ಹಸು ಕರುಗಳನ್ನು ಕಂದರದ ಮುಂಭಾಗದಿಂದ ಒಳಗಟ್ಟಿದನು. ಕಂದರದ ಮಧ್ಯೆ ಎರಡು ಭಾಗಗಳೂ ಕಡಿದಾಗಿದ್ದ ಕಾರಣ ಷೇರ್‌ಖಾನನು ಸೆರೆಸಿಕ್ಕುವುದು ಖಾತರಿಯಾಯಿತು. ಸ್ವಲ್ಪ ಸುಧಾರಿಸಿಕೊಂಡು ಮುಂದೆ ಹೋದ ಕೋಣಗಳಿಗೆ, ಹುಲಿಯ ವಾಸನೆ ಸಿಕ್ಕಿ, ಆವೇಶದಿಂದ

ಮುನ್ನುಗ್ಗಿದುವು. ಈ ಹಠಾತ್ ಧಾಳಿಗೆ ಎಚ್ಚೆತ್ತ ಷೇರ್‌ಖಾನನಿಗೆ ದಿಕ್ಕು ತೋಚದಾಯಿತು. ಮೌಗ್ಲಿಯು ಅವನನ್ನು ಮೂದಲಿಸಿದನು. ಗಾಬರಿಗೊಂಡ "ಮೋರ್", ಮೇಲೆ ಹಾರಿಹೋಯಿತು. ಹುಲಿಯು ಘರ್ಜಿಸಿತು. ಈ ಕಡೆ ತಪ್ಪಿಸಿಕೊಳ್ಳುವಂತಿಲ್ಲ. ಆ ಕಡೆ ತಿರುಗಿದರೆ ಎಮ್ಮೆಗಳ ಗುಂಪು ನುಗ್ಗಿ ಬರುತ್ತಿದೆ. ಈ ಕೋಲಾಹಲದಲ್ಲಿ "ಹಸಿದ ಹೊಟ್ಟೆ, ಬೇಟೆ ನಿಸೂರು" ಎಂಬ ಮಾತು ಮರೆತು, ಹಂದಿಯನ್ನು ಕಂಠಪೂರ್ತಿ ತಿಂದದ್ದೇ ಕಾರಣವಾಯ್ತು, ಹೊಟ್ಟೆಭಾರದಿಂದ, ಕೋಣಗಳ ಧಾಳಿಯನ್ನು ಎದುರಿಸಲಾಗದೇ ಕುಸಿದುಬಿದ್ದಿತು. ರಾಮನ ಕಾಲ್ತುಳಿತಕ್ಕೆ ಸಿಕ್ಕಿ ಸತ್ತುಹೋಯಿತು.

ಕೂಡಲೆ ಮೌಗ್ಲಿಯೂ ತೋಳಗಳೂ ಮಂದೆಯನ್ನು ಚದುರಿಸಿ, ಹೆಚ್ಚು ಗಲಭೆ ಆಗದಂತೆ ನೋಡಿಕೊಂಡರು. ಮೌಗ್ಲಿಯು ಚೂರಿಯನ್ನು ಹೊರತೆಗೆದು, ತೋಳಗಳ ಸಹಾಯದಿಂದ, ಷೇರ್‌ಖಾನನ ಚರ್ಮವನ್ನು ಸುಲಿದನು.

ಈ ಮಧ್ಯೆ ದನಕಾಯುವ ಹುಡುಗರು ಊರಿಗೆ ಬಂದು ಮೌಗ್ಲಿಯು ದನಗಳನ್ನು ಎಲ್ಲಿಗೋ ಅಟ್ಟಿಕೊಂಡು ಹೋದನೆಂದು ತಿಳಿಸಿದರು. ದನಕಾಯುವ ಕೆಲಸವನ್ನು ಸರಿಯಾಗಿ ಮಾಡಿಲ್ಲವೆಂದು ನಾಥೂವನ್ನು ದಂಡಿಸಲು ಇದೇ ರೀತಿಯ ಸಮಯಕ್ಕಾಗಿ ಕಾಯುತ್ತಿದ್ದ ಬಲದೇವನು, ಬಂದೂಕು ಹಿಡಿದು ಹೊರಟನು. ಕಂದರದ ಮಧ್ಯೆ ದನಗಳ ಮಂದೆಯನ್ನೂ, ನಾಥೂವು ಹುಲಿಯ ಚರ್ಮವನ್ನು ಸುಲಿಯುತ್ತಿರುವುದನ್ನೂ ಗಮನಿಸಿ, ಅಲ್ಲಿಗೆ ಬಂದನು. ಸರಿಯಾಗಿ ದನ ಕಾಯದೆ ಇರುವುದನ್ನು ಕ್ಷಮಿಸುವುದಾಗಿಯೂ, ಬದಲಿಗೆ ನಾಥೂವು ಹುಲಿಯ ಚರ್ಮವನ್ನು



ತನಗೆ ಕೊಡಬೇಕೆಂದೂ, ಸರ್ಕಾರದಿಂದ ಬರುವ ನೂರು ರೂಪಾಯಿಗಳಲ್ಲಿ ಒಂದು ರೂಪಾಯಿ ಕೊಡುವುದಾಗಿ ಸಹ ಹೇಳಿದನು. ನಾಥೂವು ಒಪ್ಪಲಿಲ್ಲ. ಬಲದೇವನು ಬಂದೂಕನ್ನೆತ್ತಿ ಬೆದರಿಸಿ ಅವನ ಮೇಲೆ ಕೈಮಾಡಲು ಹೊರಟನು.

ಮೌಗ್ಲಿಯು ಸಂಕೇತ ನೀಡಿದ್ದೇ ತಡ, ಅಕೇಲನು ಬಲದೇವನ ಮೇಲೆ ಹಾರಿ, ತಟ್ಟನೆ ಕೆಳಕ್ಕೆ ಕೆಡವಿ ಒತ್ತಿ ಹಿಡಿದನು. ಬೂದಣ್ಣನು ತಲೆಯ ಬಳಿ ನಿಂತು ಕೋರೆಹಲ್ಲು ತೋರಿದನು. ಬಲದೇವನು ಭಯವಿಹ್ವಲನಾಗಿ, ಇದೇನೋ ಮಾಟವಿರಬೇಕೆಂದು ಹೆದರಿ, ಗೋಗರೆದು, ಬಿಡಿಸಿಕೊಂಡು, ಹಿಂದೆ, ಹಿಂದೆ ನೋಡುತ್ತಾ, ಪ್ರಾಣವನ್ನು ಕೈಲಿ ಹಿಡಿದು, ಊರುಕಡೆ ಓಡಿದನು.

ಊರು ಸೇರಿದವನು, ಒಂದಕ್ಕೆ ಹತ್ತು ಮಾಡಿ, ನಾಥೂವಿನ ಮಾಟದ ಕತೆಯನ್ನು ಬಣ್ಣಿಸಿದನು. ಹಳ್ಳಿಯವರನ್ನು ನಾಥೂ ವಿರುದ್ಧ ಎತ್ತಿಕಟ್ಟಿದನು. ಸಂಜೆ ನಾಥೂ ದನಗಳೊಡನೆ ಹಿಂದಿರುಗಿದಾಗ, ಊರಿನ ಬಾಗಿಲು ಇನ್ನೂ ದೂರ ಇದೆ ಎನ್ನುವಾಗಲೇ ಊರು ಜನ ಅವನನ್ನು ದೆವ್ವ, ತೋಳ ಎಂದು ಜರಿದರು. ಕಲ್ಲು ಬೀಸಿದರು. ಬಲದೇವನು ಗುಂಡು ಹಾರಿಸಿದನು. ಅದು ಗುರಿತಪ್ಪಿ, ಮೌಗ್ಲಿಯು ಬಚಾವಾದನು. ಈ ಹಠಾತ್ ಘಟನೆಯಿಂದ ಮೌಗ್ಲಿಗೆ ಆಶಾಭಂಗವಾಯಿತು. ಕಾಡಿನವರು ಮನುಷ್ಯನೆಂದು ಓಡಿಸಿದರು. ಇಲ್ಲಿ ನೋಡಿದರೆ ಜನರು 'ತೋಳ' ಎಂದು ಹೇಳಿ, ಕಲ್ಲೆಸೆದು ಓಡಿಸಲು ಪ್ರಯತ್ನಿಸುತ್ತಾರೆ. ಈ ಸಮಯಕ್ಕೆ ಮೆಸ್ಸವ್ವಳು ಓಡಿ ಮುಂದೆ ಬಂದಳು. ಹುಲಿಯನ್ನು ಕೊಂದಿರುವ ಕಾರಣ ಜನರು ನಿನ್ನನ್ನು ಮಂತ್ರವಾದಿ ಎಂದು ತಿಳಿದಿದ್ದಾರೆ. ಅವರು ಸಾಯಿಸಲೂ ಹೇಸುವುದಿಲ್ಲ. ಆದ್ದರಿಂದ ನೀನು ಕಾಡಿಗೆ ಹಿಂದಿರುಗುವುದು ಮೇಲು ಎಂದು ಮಗನಿಗೆ ಹೇಳಿದಳು. "ಜಾನುವಾರನ್ನು ಸರಿಯಾಗಿ ಎಣಿಸಿಕೊಳ್ಳಿ" ಎಂದು ಊರವರಿಗೆ ಹೇಳಿ ಹುಲಿಯ ಚರ್ಮದ ಗಂಟನ್ನು ತಲೆಯ ಮೇಲಿಟ್ಟುಕೊಂಡು, ತೋಳಗಳು ಹಿಂಬಾಲಿಸುತ್ತಿರಲು ಮೌಗ್ಲಿಯು ಕಾಡಿಗೆ ಹೊರಟನು. ಊರಿನಲ್ಲಿ ಮೆಸ್ಸವ್ವಳ ಅಳುವೂ, ಬಲದೇವನ ಬಡಾಯಿಯೂ ಮುಗಿಯದ ಕತೆ ಆಗಿತ್ತು.



ಸ್ವಲ್ಪ ಸಮಯದ ಬಳಿಕ, ಊರಾಚಿನ ದಿಬ್ಬದ ಮೇಲೆ, ಬೆಳದಿಂಗಳ ಬೆಳಕಿನಲ್ಲಿ, ಹುಲಿಚರ್ಮವನ್ನು ಹೊತ್ತ ಮೌಗ್ಲಿಯೂ, ಅವನನ್ನು ಹಿಂಬಾಲಿಸುತ್ತಿರುವ ತೋಳಗಳೂ, ಛಾಯಾಚಿತ್ರದೋಪಾದಿ ಕಂಡುಬರುತ್ತಿತ್ತು.

ಷೇರ್‌ಖಾನನ ಚರ್ಮವನ್ನು ತಾಯಿ ತೋಳ ರಕ್ಷಾಗೆ ತೋರಿಸಿದಾಗ, ಅದಕ್ಕೆ ಮೌಗ್ಲಿಯ ಬಗ್ಗೆ ಹೆಮ್ಮೆ ಎನಿಸಿತು. ಬಹಳ ಸಂತೋಷಪಟ್ಟಿತು. ಆ ವೇಳೆಗೆ ಅಲ್ಲಿಗೆ ಬಂದ ಬಘೀರನಂತೂ ಆನಂದಪರವಶನಾದನು. ಎಲ್ಲರೂ ಸಭಾವೇದಿಕೆಯ ಬಳಿ ಬಂದರು.

ವೇದಿಕೆಯ ಮೇಲೆ ಹತ್ತಿದ ಮೌಗ್ಲಿಯು, ಷೇರ್‌ಖಾನನ ಚರ್ಮವನ್ನು ಹರಡಿದನು. ಅಕೇಲನು ಎಂದಿನಂತೆ, ಹಿಂದಿನಂತೆ, ಹಿಂಡಿನ ಕೂಗು ಕೊಟ್ಟನು. ಘನವಂದನೆಯಿಂದ ಪ್ರಾರಂಭವಾಗಿ ಆನಂದದಿಂದ ಸಭೆ ವಿಶೇಷ ರೀತಿಯಲ್ಲಿ ಹೀಗೆ ನಡೆಯಿತು.



ಅಕೇಲನ ಅಧಿಕಾರವನ್ನು ತಪ್ಪಿಸಿದ ದಿನದಿಂದ ಹಿಂಡು ಅನಾಯಕವಾಗಿತ್ತು. ಇಂದಿನ ಸುದಿನ, ಹಿಂಡಿನ ಕೂಗು ಕೇಳಿದ ಕೂಡಲೇ, ಅವಿವೇಕದಿಂದ ಹಾಳಾಗದೇ ಅಳಿದುಳಿದಿದ್ದ ತೋಳಗಳು ಹಾಜರಾದುವು. ಎಂದಿನಂತೆ ಸಭೆ ನಡೆಯಿತು. ಕೊನೆಯಲ್ಲಿ, ಸಭಾ ವೇದಿಕೆಯ ಮೇಲೆ ಹರಡಿದ್ದ ಹುಲಿಯ ಚರ್ಮದ ಮೇಲೆ ಕುಳಿತಿದ್ದ ಅಕೇಲನನ್ನೂ, ಸುತ್ತಲೂ ನೆರೆದಿದ್ದ ತೋಳಗಳನ್ನೂ ಕಂಡು ಮೌಗ್ಲಿಯು ಆನಂದತುಂದಿಲನಾದನು. ತತ್‌ಕ್ಷಣದಲ್ಲಿ ಹಾಡುಕಟ್ಟಿ, ಹಾಡುತ್ತಾ ಷೇರ್‌ಖಾನನ ಚರ್ಮದ ಮೇಲೆ ಮನಸೋ ಇಚ್ಛೆ ಕುಣಿದನು.



ಆನಂದನರ್ತನ ಮಾಡಿದನು. ಮಧ್ಯೆ ಮಧ್ಯೆ ಬೂದಣ್ಣನೂ, ಅಕೇಲನೂ ದನಿಗೂಡಿಸುತ್ತಿದ್ದರು. ಕುಣಿದು ದಣಿದ ಮೌಗ್ಲಿಯು, ಉಸಿರು ತೆಗೆದುಕೊಂಡು:

**ಮೌಗ್ಲಿ** : ಮಿತ್ರರೇ, ನಾನು ಮಾಡಿದ ಶಪಥವನ್ನು ಸಾಧಿಸಿದ್ದೇನೆ. ಮಾತು ಉಳಿಸಿಕೊಂಡಿದ್ದೇನೆ. ಅಲ್ಲವೇ?

**ನೆರೆದಿದ್ದ ಎಲ್ಲರೂ ಒಕ್ಕೊರಲಿನಿಂದ** : ಉಳಿಸಿಕೊಂಡಿದ್ದೀಯೆ. ಶಹಬ್ಬಾಸ್ ಎಂದುವು. ಮುಂದುವರೆದು ಮತ್ತೆ ನಾಯಕನಾಗಿ ಅಕೇಲನೂ, ಮಿತ್ರನಾಗಿ ಮೌಗ್ಲಿಯೂ ಇರಬೇಕು ಎಂದು ಘರ್ಜಿಸಿದುವು.

**ಬಘೀರ** : ಅದು ಆಗದ ಮಾತು. ಹೊಟ್ಟೆ ತುಂಬಿದರೆ, ಮತ್ತೆ ಉದ್ರೇಕವುಂಟಾಗುತ್ತದೆ. ದಾರಿತಪ್ಪಿ ಪಡೆದಿದ್ದ ಸ್ವಾತಂತ್ರ್ಯವನ್ನು, ಸ್ವತಂತ್ರ ತೋಳಗಳು ಅನುಭವಿಸಲಿ ಎಂದಿತು.

**ಮೌಗ್ಲಿ** : ಈ ಕಡೆ ಕಾಡಿನ ಗೆಳೆಯರು, ಆ ಕಡೆ ಊರಿನ ಜನರು ನನ್ನನ್ನು ಹೊರಹಾಕಿರುವುದರಿಂದ, ನಾನು ಒಂಟಿ ಯಾಗಿ ಬೇಟೆ ಆಡಿಕೊಳ್ಳುತ್ತೇನೆ.:

**ನಾಲ್ಕೂ ಬೂದಣ್ಣಗಳು** : ನಾವು ಮೌಗ್ಲಿ ಜೊತೆಯಲ್ಲೇ ಇರುತ್ತೇವೆ. ಮೌಗ್ಲಿ ನೀನು ಒಪ್ಪಲೇಬೇಕು.

ಮೌಗ್ಲಿ : ಸೋದರರರೇ, ಹಾಗೇ ಆಗಲಿ.

ಆಗಿನ್ನೂ ಚಿಗುರು ಮೀಸೆಯವನಾಗಿದ್ದ ಮೌಗ್ಲಿ ಹಾಗೆಯೇ ಇದ್ದನೇ ಎಂಬುದನ್ನು ಮುಂದೆ ನೋಡೋಣ. ಪ್ರಸ್ತುತದಲ್ಲಿ ಮೇಲಿನ ಮಾತುಕತೆ ಮುಗಿದಂತೆ ಸಭೆಯು ಚದುರಿತು.

## ಮೌಗ್ಲಿಯ "ಆನಂದನರ್ತನ"ದ ಹಾಡು

**(ಸಭಾ ವೇದಿಕೆಯ ಮೇಲೆ, ಹರಡಿದ ಷೇರ್‌ಖಾನ್ ತೊಗಲಿನ ಮೇಲೆ ಆಕೇಲನು ಕುಳಿತಿರಲು, ತೋಳಗಳು ಬಳಸಿರಲು)**

**ಆನಂದಪರವಶನಾಗಿಹೆ, ಹಠಾತ್ ರಚಿಸಿಹೆ, ಮಾಡುವೆ ಆನಂದನರ್ತನ।**
**ಹಾಡುತ, ನಲಿಯುತ, ಮಾಡುವೆ ಆನಂದನರ್ತನ॥**

**ನಾನೇ ಮೌಗ್ಲಿಯು ಹಾಡುವೆ, ಮಾಡುವೆ ಆನಂದನರ್ತನ।**
**ನಾಮಾಡುವುದೆಲ್ಲವ ವನಚರ ನೋಡಿರಿ, ಮಾಡುವೆ ಆನಂದನರ್ತನ।**
**ನಾಮಾಡಿದುದೆಲ್ಲವ ವನಚರ ಕೇಳಿರಿ, ಮಾಡುವೆ ಆನಂದನರ್ತನ।**



**ನನ್ನನು—ಕಪ್ಪೆಯನು, ಊರ ಬಾಗಿಲಲಿ,**
**ಸಂಜೆಯ ಸಮಯದಿ, ಷೇರ್‌ಖಾನ್ ಕೊಲ್ಲುವೆನೆಂದಿತ್ತು,**
**ನನ್ನನು—ಕಪ್ಪೆಯನು, ಸಂಜೆಯ ಸಮಯದಿ,**
**ಅದು ಕೊಂದೇ ಕೊಲ್ಲುವೆನೆಂದಿತ್ತು;**

ಹಂದಿಯ ಬಿಸಿಬಿಸಿ ರಕ್ತವ ಕುಡಿದು ಮತ್ತೇರಿ ಮಲಗಿದ್ದ ಷೇರ್‌ಖಾನ್।
ಮತ್ತೆಂದೂ ಕುಡಿಯಲಾಗದೆ ಮಲಗಿದವನ ಕೊಂದುಹಾಕಿದೇ ನಾನ್॥
ಒಬ್ಬನೇ ಮಾಳಕೆ ಬಂದಿಹೆ, ಬೂದಣ್ಣಾ, ತೋಳಣ್ಣ ನನ್ನ ಜೊತೆಗೆ ಬನ್ನಿ।
ಎನ್ನುತ ಜೊತೆಯಲಿ ಹೊರಟಿಹೆ ನಾನ್, ಷೇರ್‌ಖಾನನ ಭಾರೀ ಬೇಟೆಗೆನ್ನಿ॥

ದೊಡ್ಡ ಕೋಣಗಳ, ನೀಲ ಕೋಣಗಳ,
ಕೋಪದ ಕೆಂಗಣ್ಣಿನ ಕೋಣಗಳ ಮಂದೆಯನು ಕರೆತನ್ನಿ।
ನಿದ್ರಿಸಿಹ ಷೇರ್‌ಖಾನನನು, ಸದ್ದಿಲ್ಲದೆ ಮೇಲೇರಿ ಕೊಲ್ಲಲು,
ನಾ ಹೇಳಿದಂತೆ ಅವುಗಳ ನಡೆಸ ಬನ್ನಿ॥

ನಿದ್ದೆಗಣ್ಣಿನ ಷೇರ್‌ಖಾನ್, ಏಳು! ಮೇಲೇಳು!!
ಕೋಣಗಳು ಹಿಂದಿರಲು, ಯಮಪಾಶ ಹಿಡಿದು ಬಂದಿಹೆನು ನಾನು।
ಕೋಣಗಳ ಕೋಣ, ನನ್ನ ರಾಮ ಗೊರಸು ಒತ್ತಿರಲು,
ಒದ್ದಾಡುತಿರುವ ಷೇರ್‌ಖಾನ್ ಕೊರಲಿಗೆ, ಚೂರಿಯ ತಿವಿದಿಹೆ ನಾನು॥

ವೇಣುಗಂಗೆ ಜಲವೇ, ಸಿಯೋನೀ ಮರಗಳೇ ಎತ್ತ ಹೋದ ಷೇರ್‌ಖಾನ್?
ಬಿಲವ ತೋಡಲವ ಇಕ್ಕಿಯಲ್ಲ! ಮೇಲೆ ಹಾರಲು ಮೋರ್ ಅಲ್ಲ!
ರೆಂಬೆಯಲಿ ತೂಗಲು ಮಾಂಗ್ ಅಲ್ಲ!
ಕಿರುಗುಟ್ಟುತಿಹ ಬಿದಿರು ಮೆಳೆಯೇ ಎಲ್ಲಿ ಹೋದ ಷೇರ್‌ಖಾನ್?

ಕಂಡೆನವನ ನಾನು, ರಾಮನಾ ಗೊರಸಿನಡಿ ಒದ್ದಾಡುತಿಹನು।
ಮೇಲೆದ್ದು ಕೊಲ್ಲಲಾಗದೆ, ಕುಂಟ ಷೇರ್‌ಖಾನ್ ಕೆಳಗೆ ಬಿದ್ದಿಹನು।
ಶ್ಃ! ಸದ್ದು! ಮಲಗಿಹನು ಮಹಾ ಬಲಶಾಲಿ, ಇದೇ ಅವನ ಕೊನೆಯು॥

ನಾವವನ ಎಬ್ಬಿಸಲು ತರವಲ್ಲ, ಅವನಾಗಲೇ ಸೇರಿಹನು ಗಮ್ಯಸ್ಥಾನ।
ಹದ್ದುಗಳು ಇಳಿಯುವುವು, ಇರುವೆಗಳು ಮುತ್ತುವುವು, ಕಿತ್ತು ತಿನ್ನುವುವು,
ಅದೇ ಅವನ ಸ್ಥಾನಮಾನ॥

ಅರೇ! ನಾನು ದಿಗಂಬರ!! ಹದ್ದುಗಳಿಗಿದು ತಿಳಿದಿರದು,
ಷೇರ್‌ಖಾನ್, ಬೇಗ ಕೊಡು ನಿನ್ನ ಅಂಗಿ।
ಅದೀಗ ಹೊದ್ದು, ಮತ್ತೆ ಅದ ಹೊತ್ತು ಪೋಪೆ ನಾನು
ಸಭಾ ವೇದಿಕೆಯನಲಂಕರಿಸಲು ಕೊಡು ನಿನ್ನ ಬಣ್ಣದಂಗಿ॥

ನನ್ನ ಖರೀದಿಸಿದ ಗೂಳಿಯಾಣೆ, ನುಡಿದ ಮಾತನು, ತಪ್ಪದೆ ನಡೆಸಬೇಕು।
ನನ್ನ ಕಾಣಿಕೆಗೆ ಬಾಗಿ ಹಿಡಿವೆ, ನರರು ಬೇಟೆಗೆ ಹಿಡಿವ ಈ ಚೂರಿ ಸಾಕು॥

ನಿನ್ನ ಚರ್ಮವ ಸುಲಿದು ತೀರುವೆನು,
ವೇಣುಗಂಗೆಯ ಜಲವೆ, ಅವ ಕೊಡುವ ಅಂಗಿಗೆ ನೀನೆ ಸಾಕ್ಷಿದಾರ।
ಬೂದಣ್ಣ, ಅಕೇಲ ನೆರವಾಗೆ, ಚರ್ಮದ ಸುಲಿಗೆ ಹಸನಾಯ್ತು
ಷೇರ್‌ಖಾನ್ ತೊಗಲು ಬಲು ಭಾರಿ, ಭಾರ॥

ನರರ ಗುಂಪು ಬಂದು ಕಲ್ಲೆಸೆಯುವರು, ಮಂಗನಂತಾಡುವರು,
ನಡೆಯಿರೀ ಬೇಗ ಓಡೋಣ।
ಸೆಕೆಯ ಈ ರಾತ್ರಿಯಲಿ, ಹಳ್ಳಿ ದೀಪಕೆ ದೂರ,
ಮುಳುಗು ಚಂದಿರನ ಕಡೆಗೆ ತೂರಿ ಓಡೋಣ॥

ವೇಣುಗಂಗೆ ಜಲವೇ! ಯಾವುದೇ ತೊಂದರೆ ಮಾಡದ,
ನನ್ನ ಕಂಡು ಹೆದರುವರು, ಮತ್ತೆ ನನ್ನನು ಹೊಡೆದೋಡಿಸಿದರು ಏಕೆ ಹಾಗೆ?
ಪ್ರೀತಿ ಒಲವಿನಲಿ, ಒಡನಾಡಿ ಬೆಳೆದರೂ,
ಓ ತೋಳಗಳ ಗುಂಪೇ! ನನ್ನ ದೂರಮಾಡಿದಿರಿ, ಏಕೆ?
ಕಾಡು ಮುಚ್ಚಿತು ನನಗೆ, ಊರ ಬಾಗಿಲೂ ಮುಚ್ಚಿತು, ಏಕೆ ಹೀಗೆ?

ಮೃಗ ಪಕ್ಷಿಗಳ ನಡುವೆ ಮಾಂಗ್ ಹಾರಾಡುವಂತೆ,
ಕಾಡು-ಊರಿಗೂ ನಡುವೆ, ನಾನೋಡಾಡುತಿರುವೆ ಏಕೆ ಹೀಗೆ?
ಷೇರ್‌ಖಾನ್ ತೊಗಲ ಮೇಲೆ ಕುಣಿಯುತಿದ್ದರೂ ಎನ್ನ ಹೃದಯಭಾರ।
ಕಲ್ಲೆಸೆತದಿಂ ಬಾಯ್ ಹರಿದು ರಕ್ತ ಸುರಿದರೂ, ಹೃದಯ ಬಲುಹಗುರ।
ಬರಕೂಡದೆಂದೆಣಿಸಿದೀ ಅಡವಿಗೆ, ಮತ್ತೆ ಬಂದಿರುವೆ ಏಕೆ ಹೀಗೆ?

ಮನದೊಳೆರಡು ವಿಷಯಗಳು,
ಚೈತ್ರದಲೆರಡು ಹಾವುಗಳು ಹೋರಾಡುವಂತೆ।
ಒಂದರೊಡನೊಂದು ಹೋರಾಡುತಿವೆ. ಏಕೆ, ಹೀಗೆ?

ನನ್ನ ಕಣ್ಣುಗಳಲಿ ನೀರೊಸರುತಿದೆ, ಕಣ್ಣೀರು ಕೋಡಿ ಹರಿಯುತಿದೆ।
ಆದರೂ ನಾ ನಗುತ ಕುಣಿಯುತಿರುವೆ, ಏಕೆ ಹೀಗೆ?

ನಾನೆರಡು ಮೌಗ್ಲಿಗಳು, ನನ್ನ ಪಾದದ ಕೆಳಗೆ ಷೇರ್‌ಖಾನ್ ತೊಗಲಹಾಸು!
ನಾನು ಷೇರ್‌ಖಾನನ ಕೊಂದಿಹುದ, ಕಾಡೆಲ್ಲ ಕಂಡಿಹುದು, ನನಗದೇ ಲೇಸು॥

ಓ! ತೋಳಗಳೇ, ನೋಡಿ ಮತ್ತೆ ನೋಡಿ
ಷೇರ್‌ಖಾನನನು ಕೊಂದಿರುವೆ, ವಚನವನು ಪಾಲಿಸಿಹೆ ನೋಡಿ।
ನನಗರಿಯಲಾಗದ ವಿಷಯಗಳಿಂದ ಹೃದಯ ಭಾರ
ಆದರೂ ನಾ ನಗುತಿರುವೆ ನೀವೆ ನೋಡಿ॥

**ಅಭಿನಯಗಳು**

ಈ ಭಾಗದಲ್ಲಿ ಬಿ. ಪಿ. ಕಲ್ಪನೆಯ ಅಭಿನಯ 5 ಮತ್ತು 6 ಬರುತ್ತದೆ. ಈ ಅಭಿನಯಗಳಲ್ಲಿ ಎರಡೆರಡು ಭಾಗಗಳಿವೆ.

ಅಭಿನಯ 5 **ತಬಾಕಿ ಅಭಿನಯ**

ಭಾಗ - 1 ಷೇರ್‌ಖಾನನ ಡಂಭಾಚಾರ ವರ್ತನೆ

ಭಾಗ - 2 ಮೌಗ್ಲಿಯ ಧೈರ್ಯ ಮತ್ತು ಷೇರ್‌ಖಾನನ ಪುಕ್ಕಲು ಸ್ವಭಾವ ಪ್ರದರ್ಶನ

ಅಭಿನಯ 6 **ಷೇರ್‌ಖಾನ್‌ನ ಸಾವಿನ ಅಭಿನಯ**

ಭಾಗ - 1 : ಬೇಟೆಯಲ್ಲಿ ಷೇರ್‌ಖಾನನನ್ನು ಕೊಂದು ಚರ್ಮವನ್ನು ಸುಲಿಯುವುದು.

ಭಾಗ - 2 : ಷೇರ್‌ಖಾನನ ಸಾವನ್ನು ಘೋಷಿಸುವುದು.

ಗಮನಿಸಿ: ನಿಮ್ಮ ಕಲ್ಪನೆಗೆ ಕೆಲಸ ಕೊಟ್ಟರೆ ಈ ಅಧ್ಯಾಯದಲ್ಲಿ ಮತ್ತೆ ಎರಡು ಮೂರು ಅಭಿನಯಗಳನ್ನು ಮಾಡಬಹುದು. ಉದಾಹರಣೆ:

i) ಮೌಗ್ಲಿಯು “ಆನಂದನರ್ತನ” ಮಾಡುವುದು ಹಾಗೂ ಹಿಂಡಿಗೆ ವಿದಾಯ ಹೇಳುವುದು.

ii) ದನ ಕಾಯುವ ಹುಡುಗರು ಊರಿಗೆ ಬಂದು, ಮೌಗ್ಲಿಯು ಮಂದೆಯನ್ನು ಬೇರೆಲ್ಲಿಗೋ ಒಯ್ದದ್ದು, ಬಲದೇವನು ಬಂದೂಕು ಹಿಡಿದು ಹೊರಟದ್ದು, ಮೌಗ್ಲಿಯೊಡನೆ ಸಂವಾದ, ಹೆದರಿಕೆಯಿಂದ ಬಲದೇವನ ಓಟ, ಮೌಗ್ಲಿ ಹುಲಿಚರ್ಮಹೊತ್ತು ರಕ್ಷಾ ಬಳಿ ಹೋದದ್ದು.

ಹೀಗೆ ಕತೆಯುದ್ದಕ್ಕೂ ಕಲ್ಪಿಸಿದಷ್ಟೂ ಅಭಿನಯಗಳ ಪೂರವನ್ನು ಕಾಣುತ್ತೀರಿ.

## ಪ್ರಸಂಗ 4

# ಹುಲಿಗೆ ಪಟ್ಟೆಗಳು ಬಂದ ರೀತಿ



ಮೌಗ್ಲಿಯು ಷೇರ್‌ಖಾನನನ್ನು ಇನ್ನೂ ಕೊಂದಿರಲಿಲ್ಲ. ಆ ಸಮಯದಲ್ಲಿ ಒಂದು ಭೀಕರ ಬರಗಾಲವು ಬಂದಿತು. ವೇಣುಗಂಗಾನದಿ ಬತ್ತಿಹೋಗಿತ್ತು. ಬಂಡೆಗಳು ಎದ್ದುಕಾಣುತ್ತಿದ್ದುವು. ಊರುಗಳಲ್ಲಿ ದನಕರುಗಳು ನೀರು ಮೇವು ಇಲ್ಲದೆ ಸತ್ತುವು. ಕಾಡುಮೃಗಗಳು ಬಡಕಲಾದುವು. ಬಾಲು, ಬಘೀರ, ಮೌಗ್ಲಿ ಸಹ ಎಲುಬಿನ ಗೂಡಾದರು. ಗಿಡ ಮರಗಳು ಬರಡಾದುವು. ಹೂವು, ಹಣ್ಣು ಇಲ್ಲವಾಯ್ತು. ಚೀಲ್ ಮತ್ತು ಅದರ ಬಂಧುಗಳಿಗೆ ಮಾತ್ರ ಹಬ್ಬದ ಕಾಲ. ತಿಂದಷ್ಟೂ ಆಹಾರ. ತಿಂದು, ತಿಂದು ಕೊಬ್ಬುತ್ತಿದ್ದುವು.

ಗಜರಾಜ ಹಾಥಿಯು, ವೇಣುಗಂಗಾ ನದಿಯ ಬಂಡೆಗಳು ಎದ್ದು ಕಾಣಿಸಿದ ಕೂಡಲೇ ಜಲಸಂಧಿ(water truce)ಯನ್ನು ಸಾರಿತು. ಬರವು ಮಿತಿಮೀರಿ ಹೆಚ್ಚುತ್ತಿದೆಯೆಂದು ಜಲಸಂಧಿ ಸಾರುವುದರ ಅರ್ಥ. ಗಜರಾಜನು ಜಲಸಂಧಿ ಸಾರಿದನೆಂದರಾಯಿತು, ಮಾಂಸಾಹಾರಿಗಳಾಗಲೀ, ಸಸ್ಯಾಹಾರಿಗಳಾಗಲೀ, ನೀರಿನ ಸಮೀಪದಲ್ಲಿ ಹೊಡೆದಾಡುವುದು ನಿಷಿದ್ಧವೆಂದು ತಿಳಿಯುವುದು. ನೀರು ಕಲುಷಿತ ವಾಗಬಾರದು ಎಂಬುದು, ಜಲಸಂಧಿ ಸಾರುವುದರ ಮುಖ್ಯ ಉದ್ದೇಶ.

ಜಲಸಂಧಿ ಸಾರುವುದರಿಂದ ಸಸ್ಯಾಹಾರಿಗಳಿಗೆ ಸಂತೋಷ, ಮಾಂಸಾಹಾರಿ ಗಳಿಗೆ ಒಳಗುದಿ. ಹಾಗಾಗಿ ಗಜರಾಜನು ಜಲಸಂಧಿ ಸಾರಿದ ಕೂಡಲೇ, ಎಲ್ಲಾ

ಕಾಡು ಪ್ರಾಣಿಗಳೂ ನೀರಿನ ಬಳಿ ಬಂದುವು. ಮಾಂಸಾಹಾರಿಗಳು ಒಂದು ಕಡೆ, ಸಸ್ಯಾಹಾರಿಗಳು ಒಂದು ಕಡೆ ನಿಂತುವು. ಬತ್ತಿಹೋಗುತ್ತಿರುವ ಅಳಿದುಳಿದ ನೀರನ್ನೇ ಆದಷ್ಟೂ ಹೀರಿಕೊಂಡುವು. ಎಲ್ಲರ ಬಾಯಲ್ಲೂ ದರಿದ್ರ **ಬರದ** ಮಾತೇ ಮಾತು. ಜಲಸಂಧಿಯ ಸಮಯವಾದುದರಿಂದ ಬೇಟೆ ಮತ್ತು ಹೊಡೆದಾಟಗಳು ನಡೆಯು ವಂತಿಲ್ಲ. ಹೀಗಿರುವಾಗ ಅಲ್ಲಿಗೆ ಷೇರ್‌ಖಾನನು ಬಂದನು. ಅವನು ಆಗ ತಾನೆ ಒಬ್ಬ ಮನುಷ್ಯನನ್ನು ಕೊಂದು, ಅವನ ರಕ್ತ ಹೀರಿ ಬಂದಿದ್ದನು. ಬಾಯಿನಲ್ಲಿ ಇನ್ನೂ ರಕ್ತ ತೊಟ್ಟಿಕ್ಕುತ್ತಿತ್ತು. ಹಸಿರಕ್ತದ ತನ್ನ ಕೋರೆಹಲ್ಲನ್ನು ಪ್ರದರ್ಶಿಸುತ್ತಾ, ಅಂಗೈ ಆಳದ ನೀರಿನಲ್ಲಿ ಮೂತಿಯನ್ನದ್ದಿತು. ಸಸ್ಯಾಹಾರಿಗಳು ತನ್ನನ್ನು ಕಂಡು ಬೆದರಲಿ ಎಂಬುದು ಅದರ ಪರಾಕ್ರಮದ ಪ್ರದರ್ಶನವಾಗಿತ್ತು. ಷೇರ್‌ಖಾನನ ಉದ್ಧಟತನವನ್ನು ಕಂಡು ಹಾಥಿಗೆ ರೇಗಿತು. ಷೇರ್‌ಖಾನನನ್ನು ಗದರಿತು. ಅದಕ್ಕುತ್ತರವಾಗಿ "ಇದು ನನ್ನ ರಾತ್ರಿ. ಆ ಕಾರಣ ಮನುಷ್ಯನನ್ನು ಕೊಂದಿದ್ದೇನೆ" ಎಂದಿತು ಷೇರ್‌ಖಾನ್. ಅಸಹ್ಯದಿಂದ, ಕೋಪದಿಂದ ಗಜರಾಜನು ಅವನನ್ನು ಅಲ್ಲಿಂದ ಓಡಿಸಿದನು.

ಷೇರ್‌ಖಾನನು, "ಇದು ನನ್ನ ರಾತ್ರಿ" ಎಂದನು. ಇದರ ಅರ್ಥವೇನು? ಎಂಬುದಾಗಿ ಮೌಗ್ಲಿಯು ಹಾಥಿಯನ್ನು ಕೇಳಿ ದನು. ಆಗ ಹಾಥಿಯು ಹೇಳಿದ ಕತೆಯನ್ನು ಇಲ್ಲಿ ಕಾಣುತ್ತೀರಿ.



ಈ ಪ್ರಪಂಚವು ಸೃಷ್ಟಿಯಾದ ಸಮಯ. ಆಗ "ಥಾ" ಎಂಬ ಗಜರಾಜನಿದ್ದನು. ಉತ್ತಮವಾಗಿ ಅಧಿಕಾರ ನಿರ್ವಹಿಸಿದನು; ಸಾಗರ ಗಳಿಂದ ಕಾಡುಗಳನ್ನು ಈಚೆಗೆಳೆದು ಹಾಕಿದನು; ದಂತಗಳಿಂದ ಗಿರಿ ನದಿಗಳನ್ನು ಸೃಷ್ಟಿಸಿದನು; ಪಾದ ಗಳಿಂದ ಘಟ್ಟಿಸಿ, ಸರೋವರ ಗಳನ್ನು ಉಂಟು ಮಾಡಿದನು; ಅವನ ಕಾಲದಲ್ಲಿ ಎಲ್ಲರೂ ಸಸ್ಯಾಹಾರಿಗಳೇ; ಎಲ್ಲಾ ಪ್ರಾಣಿಗಳೂ ಐಕಮತ್ಯದಿಂದ ಕೂಡಿ ಬಾಳುತ್ತಿದ್ದುವು. ಯಾವುದೇ ಪ್ರಾಣಿಗೂ ಮಾಂಸದ ರುಚಿ ಆಗಲೀ, ಮನುಷ್ಯನ ವಾಸನೆ ಆಗಲೀ ತಿಳಿಯದು. ಯಥೇಷ್ಟವಾಗಿ ಊಟ, ತಿಂಡಿಗಳು ದೊರಕಿದ ಕಾರಣ, ಸೋಮಾರಿತನವು ಹೆಚ್ಚಿತು. ಪರಸ್ಪರ ಕಲಹಗಳುಂಟಾದುವು. ಆಗ "ಥಾ"ವು ಹುಲಿಯನ್ನು ನ್ಯಾಯಾಧಿಕಾರಿಯನ್ನಾಗಿ ನಿಯಮಿಸಿದನು.



ಆ ಕಾಲದಲ್ಲಿ ಹುಲಿಗೆ ಪಟ್ಟೆಗಳಿರಲಿಲ್ಲ. ಅದೂ ಸಸ್ಯಾಹಾರಿ, ಹುಲ್ಲು ಮೇಯುತ್ತಿತ್ತು. ಅದರದು ಶುದ್ಧ ಹಳದಿಬಣ್ಣದ ಮೈಯಾಗಿದ್ದು ಮೈ ಮಿರುಗುತ್ತಿತ್ತು. ಚಿನ್ನದ ಪುತ್ಥಳಿಯೋ ಎಂಬಂತಿತ್ತು. ಹೀಗಿರುವಾಗ ಒಂದು ದಿನ ಎರಡು ಕಡವೆಗಳು ಕಾದಾಡಿದುವು. ಕಾದಾಟದ ಮಧ್ಯೆ ಒಂದು ಕಡವೆಯ ಕೊಂಬು, ಹುಲಿರಾಯನಿಗೆ ಚುಚ್ಚಿತು. ಕೋಪದಿಂದ ಹುಲಿರಾಯನು ಅದನ್ನು ಕೊಂದುಹಾಕಿದನು. ಆ ವರೆಗೆ ಯಾವ ಪ್ರಾಣಿಯೂ ಜಗಳದಲ್ಲಿ ಸತ್ತಿರಲಿಲ್ಲ. ಗಜರಾಜನು ಬಂದು ಕೇಳಿದಾಗ, ರಕ್ತದ ವಾಸನೆಯ ಮತ್ತಿನಿಂದ ಮತಿಗೆಟ್ಟಿದ್ದ ಮೃಗಗಳು, ಬಾಯಿಗೆ ಬಂದಂತೆ ಮಾತನಾಡಿದುವು. ಆಗ ಗಜರಾಜನು, ಅಪರಾಧಿಯನ್ನು ಗುರುತಿಸಲು ಗಿಡಮರ ಗಳಿಗೆ ಆಜ್ಞೆಮಾಡಿದನು. ಈ ವಿಷಯದಲ್ಲಿ ಬೂದು ಮಂಗನನ್ನು ನ್ಯಾಯಾಧಿಕಾರಿ ಯನ್ನಾಗಿ ನೇಮಿಸಿದನು. ಅದು ಸ್ಥಾನವಿವೇಚನೆ ಇಲ್ಲದೆ ಕಪಿಚೇಷ್ಟೆ ಮಾಡುತ್ತಿತ್ತು.

ಇಷ್ಟರಲ್ಲಿ ಅಲ್ಲಿಗೆ ಬಂದ ಮಹಿಷಿಗಳು (ಎಮ್ಮೆ, ಕೋಣಗಳು) ತಾವು ಗವಿಯಲ್ಲಿ ವಾಸಮಾಡುವ "ಭಯ"ವನ್ನು ಕಂಡುದಾಗಿ ಹೇಳಿದುವು. ಆ ದಿನದಿಂದ ಎಲ್ಲಾ ಪ್ರಾಣಿಗಳಿಗೂ "ಭಯ"ದ ದರ್ಶನವಾಗಿ, ಪರಸ್ಪರ ಅನುಮಾನಪಟ್ಟು ಬೇರೆ ಬೇರೆ ಆದುವು. ಪ್ರಾಣಿಗಳು ಮನುಷ್ಯನನ್ನು "ಭಯ" ಎಂದು ಕರೆದುವು. ಏಕೆಂದರೆ ಅವರು ದೂರದಿಂದಲೇ ಕವಣೆ, ಈಟಿ, ಗುಂಡು ಮುಂತಾದುವುಗಳಿಂದ ಪ್ರಾಣಿ ಗಳನ್ನು ಕೊಲ್ಲುತ್ತಿದ್ದರು. ಹಾಗಾಗಿ ಅವರು "ಭಯ" ರೂಪ ತಾಳಿದರು.

ಆದರೆ ನ್ಯಾಯಾಧಿಕಾರಿ ಆಗಿದ್ದ ಹುಲಿಯ ಸಂತತಿಯೊಂದು, ಈಗಾಗಲೇ ರಕ್ತದ ಸೋಂಕು ಇದ್ದ ಕಾರಣ, ಧೈರ್ಯಮಾಡಿ ಒಂದು ಭಯ(ಮನುಷ್ಯ)ವನ್ನು

ಕೊಂದುಹಾಕಿತು. ಕೂಡಲೇ ಭಯವು ಹುಲಿಯ ಬೆನ್ನಟ್ಟಿತು. ಹೀಗಾಗಿ ಕಾಡಿನ ನಿಯಮ ಉಲ್ಲಂಘನೆಯಾಗಿ ಒಬ್ಬರಿಂದ ಸಾವಿನ ಭಯವೂ, ಇನ್ನೊಬ್ಬರಿಂದ ನಾಚಿಕೆ, ಲಜ್ಜೆಯೂ ಪ್ರಪಂಚದಲ್ಲಿ ಹುಟ್ಟಿಕೊಂಡುವು.

ಈ ಎಲ್ಲಾ ಅನಾಹುತಕ್ಕೆ ಹುಲಿಯೇ ಕಾರಣವೆಂದು ತಿಳಿದ ಗಜರಾಜ "ಥಾ"ನು, ಘೀಂಗುಡುತ್ತಾ, ಬರಸಿಡಿಲಿನಂತಹ ಶಾಪವನ್ನು ಕೊಟ್ಟನು. "ಕಾಡಿನ ಪ್ರಾಣಿಗಳು ಇನ್ನು ಮುಂದೆ, ಹುಲಿಯ ಜೊತೆ ಸೇರದಿರಲಿ; ಭಯವನ್ನು ಕರೆತಂದು, ಆತಂಕವನ್ನುಂಟುಮಾಡಿರುವ ನಿನಗೆ ಸರ್ವವಿಧದಲ್ಲೂ (ಆಳವಾದ ಕಂದರಗಳು, ಬಾಧಿಸುವ ಗಿಡ ಮರ ಬಳ್ಳಿಗಳು ಹೆಚ್ಚಿ) ತೊಂದರೆ ಆಗಲಿ; ಆ ಭಯವೇ ನಿನಗೆ ಮೃತ್ಯುಪ್ರಾಯವಾಗಲಿ. ನಿನ್ನ ಎಲ್ಲಾ ಮರಿಗಳಿಗೂ ಭಯವು ಪಟ್ಟೆ ಚರ್ಮವನ್ನು ಹೊದ್ದಿಸಲಿ. ನಿನ್ನ ಸಾಹಸಕ್ಕೆ ಮೆಚ್ಚುತ್ತೇನೆ. ಆ ಕಾರಣ ವರ್ಷದಲ್ಲಿ ಒಂದು ದಿನ (ಮಂಜಿನ ಮುಸುಕಿಲ್ಲದೆ ಶುಕ್ರನಕ್ಷತ್ರವು ಕಂಡ ದಿನ) ಮಾತ್ರ ನಿನಗೆ ಭಯವು ಇಲ್ಲದಿರಲಿ. ಉಳಿದ ಎಲ್ಲಾ ದಿನಗಳೂ ಹಾರುಕೋಲು (ಈಟಿ, ಭರ್ಜಿ), ಕವಣೆ, ಕುಣಿಕೆ, ಬೋನು, ಗುಂಡು ಇವುಗಳೂ, ಆಳವಾದ ಕಂದರಗಳೂ, ಬೆಂಕಿಯೂ (ಕೆಂಪಲರು) ಇವುಗಳು ನಿನ್ನನ್ನು ಪೀಡಿಸಲಿ" ಎಂದು ಶಾಪವನ್ನು ಕೊಟ್ಟಿತು.

ಗಜರಾಜ "ಥಾ"ನ ಆಜ್ಞೆ ಹೊರಟಿದ್ದೇ ತಡ ಕೊಂಬೆ ರೆಂಬೆಗಳ, ಬಳ್ಳಿಗಳ, ಮೇಲೆ ಮುಳ್ಳು ಬಂದು ಭೂಮಿಯತ್ತ ಇಳಿಬಿದ್ದು, ನ್ಯಾಯಾಧಿಕಾರಿ ಆಗಿದ್ದ ಹುಲಿಯ ಮೈಮೇಲೆ ಬರೆಹಾಕಿದುವು. ಎದುರು ಬಂದ "ಥಾ"ಗೆ ಗೌರವ ತೋರದ ಉದ್ಧಟತನಕ್ಕಾಗಿ ಕೆಸರಿನಿಂದ ಆ ಪಟ್ಟೆ ಗುರುತಾಗಿದೆ ಎಂದು ಹುಲಿಯು ಸುಳ್ಳು ಹೇಳಿತು. ಆ ಸುಳ್ಳಿನ ಫಲವಾಗಿ, ಮೊದಲ ಹುಲಿಯ ಕಪ್ಪು ಪಟ್ಟೆಗಳು ಶಾಶ್ವತವಾಗಿ, ತಲೆತಲಾಂತರವಾಗಿ ಅಂಟಿಕೊಂಡುಬಿಟ್ಟಿತು. ಹೀಗಾಗಿ ಹಿರಿಯರು ಮಾಡಿದ ತಪ್ಪಿಗೆ ಕಿರಿಯರೂ ಶಿಕ್ಷೆಯನ್ನು ಅನುಭವಿಸುವಂತಾಯಿತು.

ಆಗ ಮೌಗ್ಲಿಯು "ಅದು ಸರಿ, ಕಡವೆಯ ಕೊಂಬು ತಗುಲಿ, ಗಾಯವಾದಾಗ ಅದನ್ನು ಕೊಂದುಹಾಕಿತು ಎನ್ನೋಣ. ಆದರೆ ಸಸ್ಯಾಹಾರ ಬಿಟ್ಟು ಏಕೆ ಮಾಂಸಾಹಾರಿ ಆಯಿತು ಎಂದು ತೋಚುತ್ತಿಲ್ಲ" ಎಂದನು.

ಆಗ ಗಜರಾಜ "ಥಾ"ನು ಹೀಗೆ ಉತ್ತರಿಸಿದನು. "ಹುಲಿಯು ತಪ್ಪನ್ನು ಒಪ್ಪಿಕೊಳ್ಳಲಿಲ್ಲ. ಗಿಡ, ಮರ, ಬಳ್ಳಿಗಳು ಕರಿಯ ಪಟ್ಟೆಗಳ ಬರೆ ಹಾಕಿದಾಗ, "ಥಾ"ಗೆ ಸುಳ್ಳು ಹೇಳಿತು. ಅಲ್ಲದೆ ಕೋಪದ ಭರದಲ್ಲಿ ಸಸ್ಯಾಹಾರವನ್ನು ಬಿಟ್ಟು ಸಸ್ಯಾಹಾರಿಗಳನ್ನೇ ತಿನ್ನಲು ಪ್ರಾರಂಭಿಸಿತು. ಬರೆ ಹಾಕಿದ ಗಿಡ, ಮರ, ಬಳ್ಳಿಗಳ ಮೇಲೆ ಸೇಡು ತೀರಿಸಿಕೊಳ್ಳಲು ಮನುಷ್ಯರನ್ನು ಎತ್ತಿಕಟ್ಟಿತು. ಈ ರೀತಿಯಲ್ಲಿ ಅವಿವೇಕಿ ಹುಲಿಯು ಸಾವು, ಲಜ್ಜೆ, ಅವಮಾನ, ಭಯ ಇವುಗಳನ್ನು ಕಾಡಿನಲ್ಲಿ ತುಂಬಿ, ತಾನು ಮಾಂಸಾಹಾರಿ ಆದದ್ದಿರಲಿ, ಮನುಷ್ಯನ ಮೂಲಕ, ಕಾಡಿನ ನಾಶಕ್ಕೂ ಕಾರಣವಾಯಿತು.

## ಕಾಡಿನ ಕಟ್ಟಳೆ

ಕಾಡಿನ ಕಟ್ಟಳೆ (ನಿಯಮ) ಗಳು ಆಕಾಶದಷ್ಟೇ ಅನಾದಿ।
ನೈಜವಾದವುಗಳು।
ಇವನು ಪಾಲಿಪ ತೋಳ ಬಾಳಲಹುದು।
ತಪ್ಪಿದರದು ಸಾಯಲೇ ಬೇಕು ॥ 1 ॥

ಮರವನು ಬಳಸಿ ಬಳುಕುವ ಬಳ್ಳಿಯಂತೆ।
ನಿಯಮ ಅತ್ತಿತ್ತ ಊಗುವುದು।
ಹಿಂಡಿನ ಬಲವೇ ತೋಳವು।
ಹಿಂಡುತೋಳಕೆ ಬಲವಾಗಿ ನಿಲ್ಲಲೇ ಬೇಕು ॥ 2 ॥

ಮೂಗು ತುದಿಯಿಂದ, ಬಾಲ ತುದಿಯವರೆಗೆ।
ಅನುದಿನವು ಶುದ್ಧಮಾಡು, ಮಿತಿಯಾಗಿ ನೀರನು ಹೀರು।
ರಾತ್ರಿಯೊಳೇ ಬೇಟೆ ಎಂದು ನೆನಪಿರಲಿ।
ಹಗಲು ನಿದ್ದೆಗಾಗೆಂಬುದನು ಮರೆಯದಿರಬೇಕು ॥ 3 ॥

ನರಿಯು ಹುಲಿಯನು ಹಿಂಬಾಲಿಸಲಿ।
ಮರಿ, ನಿನ್ನ ಮೀಸೆ ಚಿಗುರಿದಾಗ।
ತೋಳ, ಬೇಟೆಗಾರನೆಂಬುದ ನೆನೆದು।
ಮುನ್ನುಗ್ಗಿ, ನಿನ್ನ ತುತ್ತನು ನೀನೆ ಗಳಿಸಬೇಕು ॥ 4 ॥

ಹಿಂಡಿನ ತೋಳವಿನ್ನೊಂದರೊಡನೆ ಸೆಣಸುವಾಗ।
ಅವನೊಡನೆ ಮಾತ್ರ ದೂರವಿರು।
ಹಿಂಡಿನಿತರರು ಜೊತೆಯಾದಾರು ಜೋಕೆ।
ಕಲಹದಿಂದ ಹಿಂಡು ಹಾಳಾಗದಿರಬೇಕು ॥ 5 ॥

ಹುಲಿ, ಚಿರತೆ, ಕರಡಿಗಳು ಕಾಡಿನಾ ಹಿರಿಯರು।
ಅವರೊಡನೆ ಶಾಂತಿ ಧರಿಸು।
ಮೌನಿ, ಗಜರಾಜನ ಕೆಣಕದಿರಬೇಕು।
ವರಾಹನ ಬಿಲದೊಳಗೆ ತೂರದಿರಬೇಕು ॥ 6 ॥

ಕಾಡಿನೊಳು ಗುಂಪುಗುಂಪಿನ ನಡುವೆ ಕಾದಾಟವಿರಲು।
ಗುರುತರದ ದಾರಿಗಳೆರಡಿಹವು।
ಮೊದಲಾಳುಗಳ ಆಣತಿಗೆ ಕಾಯಬೇಕು।
ಅವರ ಸವಿನುಡಿಯಿಂದ ಹುಲುಸಾಗಬೇಕು ॥ 7 ॥

ತೋಳದಾ ಗವಿಯದರ ಭದ್ರಕೋಟೆ।
    ಅದು ಅದರ ಖಾಸಗೀ ನೆಲೆಯು।
ಮುಂದಾಳು, ಸಭೆ ಮಂದಿ ಯಾರೂ।
    ಹೋಗದಂತೆ ದೂರವಿರಬೇಕು ॥ 8 ॥

ತೋಳದಾ ಗವಿ ಅದರ ಭದ್ರ ಕೋಟೆ।
    ಅದರ ವಿನ್ಯಾಸ ತಪ್ಪಿರಲು।
ಸಭೆಯಲಿ ಸೂಚನೆಯ ಹೇಳಿಕಳುಹಬೇಕು।
    ನೆಲೆಯ ತೋಳವದನಾಗ ಭದ್ರಪಡಿಸಬೇಕು ॥ 9 ॥

ಮಧ್ಯರಾತ್ರಿಗೆ ಮುನ್ನಿನಾ ಬೇಟೆ।
    ಸದ್ದುಗದ್ದಲ ಬೇಡ। ಕೂಗದಿರು ನೀನು।
ಜಿಂಕೆಗಳು ಹೆದರಿ ಓಡದಂತೆ। ಸೋದರರ ಹೊಟ್ಟೆಕಾಯದಂತೆ।
    ಎಚ್ಚರವಹಿಸಬೇಕು ॥ 10 ॥

ನಿಮಗಾಗಿ, ನಿಮ್ಮ ಸಂಗಾತಿಗಾಗಿ।
    ತಿನುವಷ್ಟು ಮರಿಗಳಿಗಾಗಿ। ನೀ ಬೇಟೆ ಆಡು।
ವಿನೋದಕೆಂದೂ ಬೇಟೆ ಆಡದಿರು। ಏಳೇಳುಬಾರಿ ಒತ್ತಿ ಹೇಳುವೆ ಕೇಳು।
ಮಾನವನ ಗೋಜಿಗೆ ಹೋಗದಿರಬೇಕು ॥ 11 ॥

ದುರ್ಬಲನ ಬೇಟೆಯನು ನೀ ಸೂರೆ ಮಾಡದಿರು।
    ಮಾಡಿದರೂ ಬಿಕನಾಸಿಯಂತೆಲ್ಲವನು ನುಂಗದಿರು।
ದುರ್ಬಲನ ಶಕ್ತಿಯೇ "ಸಂಘಶಕ್ತಿ" ಎಂಬುದನರಿತು।
    ಅವನ ಪಾಲವನಿಗೆ ಕೊಡಬೇಕು ॥ 12 ॥



ಗುಂಪುಬೇಟೆಯಲಿ ಕೊಂದದ್ದು
ಗುಂಪಿನೆಲ್ಲರೂ ತಿನ್ನಬಹುದು।
ಆದರದನಾರೂ ಮನೆಗೊಯ್ಯಬಾರದು।
ಹಾಗೆ ಒಯ್ದವರ ಜೀವ ಬಲಿ ಕೊಡಬೇಕು ॥ 13 ॥

ತೋಳವೊಂದರ ಬೇಟೆ ಅದರದಾಗಿ।
ಅದು ಮನಬಂದಂತೆ ಮಾಡಲುಂಟು।
ಆದರದು ಸಮ್ಮತಿಸುವವರೆಗೆ।
ಹಿಂಡಿನಿತರರು ಮುಟ್ಟದಿರಬೇಕು ॥ 14 ॥

ಮರಿಯ ಹಕ್ಕು, ಪುಟಾಣಿಯ ಹಕ್ಕು।
ಹಿಂಡಿನೆಲ್ಲರನೂ ಅದು ಕೇಳಬಹುದು।
ಬೇಟೆಗಾರನ ಊಟ ಮುಗಿದಂತೆ।
ಯಾರೂ ಇಲ್ಲವೆನ್ನದೆ, ಮರಿಗೆ ಕೊಡಬೇಕು ॥ 15 ॥

ತಾಯಿಯಧಿಕಾರ, ಮನೆಯಧಿಕಾರವಹುದು।
ತಾಯಿ, ಮರಿಗೆಂದು ಕೇಳಿದರೆ।
ಎಲ್ಲರದೊಂದೊಂದು ಭಾಗವನು।
ಇಲ್ಲವೆನ್ನದೆ ಕೊಡಲು ಬೇಕು ॥ 16 ॥

ತಂದೆಯಧಿಕಾರ, ಗವಿಯ ಅಧಿಕಾರವಿರೆ।
ತನಗೆ ತೋರಿದೆಡೆ ಬೇಟೆಯಾಡಬಹುದು।
ಹಿಂಡಿನಧಿಕಾರ ಅದರ ಮೇಲಿಲ್ಲ।
ಪಂಚಾಯಿತರಿಗುಂಟೆಂಬುದನು। ತಿಳಿದಿರಬೇಕು ॥ 17 ॥

ವಯಸಿನಾಬಲ, ಮಂತ್ರಬಲ, ತಂತ್ರಬಲ,
ಯುಕ್ತಿಬಲವೆಲ್ಲ ಕೂಡಿ।
ಕಾಡುನಿಯಮಗಳ ಸ್ಪಷ್ಟತೆಯಿಲ್ಲದಿರೆ।
ಮುಂದಾಳಿನ ಮಾತೇ, ನಿಯಮವೆಂದು ತಿಳಿಯಬೇಕು ॥ 18 ॥

ಇವುಗಳೊಂದಿಷ್ಟು ಕಾಡು ಕಟ್ಟಳೆಗಳು।
ಇನ್ನೂ ಇವೆ ಹತ್ತಾರು, ನೂರಾರು।
ನಿಯಮಗಳ ಕಾಲು, ತಲೆ, ಬಾಲ ಎಲ್ಲವೂ।
"ವಿಧೇಯತೆ" ಎಂಬುದನು ನೀ ತಿಳಿಯಬೇಕು ॥ 19 ॥

## ಪ್ರಸಂಗ 5

# ಊರು ಕಾಡಾಯಿತು

ಹುಲಿ ಚರ್ಮವನ್ನು ಕೊಡಲು, ಕಾಡಿನಲ್ಲಿ ಮೌಗ್ಲಿಯು ನಿರಾಕರಿಸಿದಾಗ, ಬಲದೇವನು ಮೌಗ್ಲಿಯ ಮೇಲೆ ಕೈಮಾಡಲು ಮುಂದಾದನು. ಅಕೇಲ, ಬೂದಣ್ಣರ ಸಹಾಯದಿಂದ ಮೌಗ್ಲಿಯು ಬಲದೇವನನ್ನು ಕೆಳಗೆ ಕೆಡವಿದನು. ಆಗ ಇದು ದೆವ್ವ, ಪಿಶಾಚಿ ಕಾಟವೆಂದು ಬಗೆದು ಬಲದೇವನು ಊರಿಗೆ ಓಡಿದನು. ಊರಿಗೆ ಬಂದವನು ಒಂದಕ್ಕೆ ಹತ್ತು ಮಾಡಿ, ಊರಿನ ಜನರನ್ನು ನಂಬಿಸಿ, ಮೌಗ್ಲಿಯು ಪಿಶಾಚಿ ಎಂದೂ, ಅವನನ್ನು ಊರೊಳಗೆ ಬಿಡಕೂಡದೆಂದೂ ಒಪ್ಪಿಸಿದನು.

ಮೌಗ್ಲಿಯು ಷೇರ್‌ಖಾನನನ್ನು ಕೊಂದು, ಹುಲಿಚರ್ಮವನ್ನು ಸುಲಿದು, ಅದನ್ನು ಹೊತ್ತು ಊರ ಬಳಿಗೆ ಬಂದನು. ಈಗಾಗಲೇ ನಡೆದಿದ್ದ ಬಲದೇವನ ಪಿತೂರಿಯ ಕಾರಣ ಊರಿನವರು ಬೈಗುಳ ಕೂಗುತ್ತಾ, ಕಲ್ಲುಬೀಸಲು ಪ್ರಾರಂಭಿಸಿದರು. ಜನರ ಈ ನಡೆವಳಿಕೆಗೆ ಜಿಗುಪ್ಸೆಗೊಂಡ ಮೌಗ್ಲಿಯು ಕಾಡಿಗೆ ವಾಪಸ್ ಆದನು.

ಮೂರುತಿಂಗಳ ಕಾಲ ಅವನು ಮನುಷ್ಯರ ಬಳಿ ಇದ್ದು ಕಲಿತಿದ್ದನ್ನೂ; ಕೆಲವಾರು ಜನರ ಕೆಟ್ಟ ನಡತೆಯನ್ನೂ; ತನ್ನಮ್ಮ ಮೆಸ್ಸವ್ವಳು ಮಾತ್ರ ಪ್ರೀತಿ, ಅಕ್ಕರೆಯಿಂದ ನೋಡಿಕೊಂಡದ್ದನ್ನೂ; ಹಾಲೆರೆದು ಪೋಷಿಸಿದ್ದನ್ನೂ ವರ್ಣಿಸಿದನು. ತಾನು ಮತ್ತೆ ಊರಿಗೆ ಹೋಗುವುದಿಲ್ಲವೆಂದೂ, ಕಾಡಿನಲ್ಲಿ ಒಂಟಿಯಾಗಿ ಬೇಟೆ ಆಡಿ ಬದುಕುವೆನೆಂದೂ ಹೇಳಿದನು. ತಾಯಿ ತೋಳ ರಕ್ಷಾ ಮತ್ತಿತರರು ಕುತೂಹಲದಿಂದ ಎಲ್ಲವನ್ನೂ ಕೇಳಿಸಿಕೊಂಡರು. ಇನ್ನೂ ವಿವರಣೆ ಮುಗಿದಿಲ್ಲ. ಏದುಸಿರು ಬಿಡುತ್ತಾ ಮಾಂಗ್ ಅಲ್ಲಿಗೆ ಬಂದಿತು. ಬಿಸಿಬಿಸಿ ಸುದ್ದಿ ಹೇಳಲಾರಂಭಿಸಿತು.

ಊರಿನಲ್ಲಿ ಜೇನುಗೂಡು ಎದ್ದಷ್ಟು ಗಲಭೆ ಆಗುತ್ತಿದೆ. ಊರು ಮುಂದೆ ಬೆಂಕಿ ಹಾಕಿದ್ದಾರೆ. ಮೆಸ್ಸವ್ವನನ್ನೂ, ಅವಳ ಗಂಡನನ್ನೂ ಕೋಣೆಯಲ್ಲಿ ಕಟ್ಟಿಹಾಕಿದ್ದಾರೆ. ಸಂಜೆಗೆ ಅವರನ್ನು ಸುಟ್ಟುಹಾಕಲು ಯೋಚಿಸಿದ್ದಾರೆ. ಬಲದೇವನು ನಿನ್ನನ್ನು ಹುಡುಕಿ, ಸಾಯಿಸಬೇಕೆಂದು ಹೊರಟಿದ್ದಾನೆ, ಎಂದು ಹೇಳಿ, ಅವನ ಜೊತೆಯಲ್ಲಿ ಜನರಿದ್ದಾರೆ ಜೋಕೆ ಎಂದು ಎಚ್ಚರಿಸಿತು.

ಆ ವೇಳೆಗೆ ದೂರದಲ್ಲಿ ಬಲದೇವನು ಬಂದೂಕು ಹಿಡಿದು ಬರುತ್ತಿರುವುದು ಕಾಣಿಸಿತು. ಸೌದೆ ಕಡಿದು ಮಾರುವವರೂ ಅವನ ಜೊತೆ ಸೇರಿದರು. ಬಲದೇವನ ಬಡಾಯಿ ಕೇಳಲು ಎಲ್ಲರೂ ಒಂದೆಡೆ ಕುಳಿತರು. ಅಕೇಲ, ಬಘೀರ, ಮೌಗ್ಲಿ,

ಮರಿಗಳು ಅಲ್ಲಿಗೆ ಹಿಂಬಾಲಿಸಿ, ಹೊಂಚುಹಾಕಿ ಕೇಳಿಸಿಕೊಂಡು, ಮಾಂಗ್ ಹೇಳಿದ ಸುದ್ದಿ ನಿಜವೆಂದು ಸಾಬೀತು ಪಡಿಸಿಕೊಂಡರು.

ಕೂಡಲೇ ಬಘೀರನೂ ತೋಳಗಳೂ, ಬಲದೇವನನ್ನು ಊರಿಗೆ ಹಿಂತಿರುಗಲು ಬಿಡಬಾರದೆಂದೂ, ತಡೆಹಾಕಬೇಕೆಂದೂ, ಸಂಜೆ ಆದ ಮೇಲೆ ಬಘೀರನೂ, ತಾನೂ ಊರ ಬಳಿ ಇರಬೇಕೆಂದೂ ಕರಾರು ಮಾಡಿಕೊಂಡು, ಮೌಗ್ಲಿಯು ಅಲ್ಲಿಂದ ಮಾಯವಾಗಿ, ಓಡುತ್ತಾ ಹಳ್ಳಿಯನ್ನು ಸೇರಿದನು. ಹಳ್ಳಿಯವರು ಎಂದಿನಂತಲ್ಲದೆ, ಮುಂಚಿತವಾಗಿ ಹೊಲದ ಕೆಲಸ ಬಿಟ್ಟು ಊರಮುಂದೆ ಸೇರಿದ್ದರು. ಊರು ಮುಂದೆ, ಸುಡುವುದಕ್ಕಾಗಿ ಬೆಂಕಿ ಹಾಕಿ ತಯಾರಿಸಿದ್ದಾರೆ. ಜನರು ಹಾಳುಹರಟೆಯಲ್ಲಿ ತೊಡಗಿದ್ದಾರೆ.

ಮೌಗ್ಲಿಯು ಬಂದವನೇ ಮೆಸ್ಸವ್ವನ ಮನೆ ಕಡೆ ನುಗ್ಗಿ, ಹಿಂದಿನ ಕಿಟಕಿಯನ್ನು ಮುರಿದು, ಕೋಣೆಯೊಳಗೆ ನುಗ್ಗಿದನು. ಮೆಸ್ಸವ್ವ ಮತ್ತು ಅವಳ ಗಂಡನನ್ನು ಬಿಗಿದಿದ್ದ ಕಟ್ಟುಗಳನ್ನು ಬಿಚ್ಚಿದನು. ಏಕೆ? ಹೀಗೆ ಎಂದು ಕೇಳಿದ್ದೇ ತಡ, ಮೆಸ್ಸವ್ವಳು ಗದ್ಗದಿತಳಾಗಿ "ಮಗೂ, ನಾಥೂ! ಬಂದೆಯಾ! ನೀನು ನಮ್ಮನ್ನು ರಕ್ಷಿಸುತ್ತೀಯೆ ಎಂಬ ನಂಬಿಕೆ ನನಗಿತ್ತು, ಬಾಗಿಲ ಹೊರಗೆ 3-4 ಜನ ಕಾವಲಿದ್ದಾರೆ. ಸಂಜೆಗೆ ನಮ್ಮನ್ನು ಸುಡುತ್ತಾರಂತೆ. ನಿನ್ನನ್ನು ಮನೆ ಸೇರಿಸಿ, ಪೋಷಣೆ ಮಾಡಿದ್ದೇ ತಪ್ಪಾಯಿತು ನೋಡು".

ಅಲ್ಲಿಗೆ, ಮೌಗ್ಲಿಯು ಅವಳನ್ನು ತಡೆದು, "ಅದೆಲ್ಲಾ ಆಮೇಲೆ. ಮೊದಲು ಜಾಗ ಖಾಲಿ ಮಾಡೋಣ. ಬಲದೇವನು ಸಂಜೆವರೆಗೆ ಇಲ್ಲಿಗೆ ಬರದಂತೆ ವ್ಯವಸ್ಥೆ ಮಾಡಿದ್ದೇನೆ" ಎಂದು ಅವರಿಬ್ಬರನ್ನೂ ಕಿಟಕಿಯಿಂದ ಹೊರಹಾಕಿದನು. ಅವರಿಬ್ಬರೂ ತಮ್ಮಲ್ಲಿದ್ದ ಹಣ ಕಾಸು ತೆಗೆದುಕೊಂಡು, ನಾಥೂವಿನ ಮಾತಿನಂತೆ, ತೋಳಣ್ಣಗಳ ಜೊತೆ ಕಾಡುದಾರಿ ಹಿಡಿದು, ರಕ್ಷಾ ಇರುವ ಗುಹೆಯನ್ನು ಸೇರಿದರು. ಅವರಿಬ್ಬರನ್ನೂ ಕಂಡು ರಕ್ಷಾ ಬಹಳ ಸಂತೋಷಪಟ್ಟಿತು. ತನ್ನ ಮೌಗ್ಲಿಯ ಬಗ್ಗೆ ಅದಕ್ಕೆ ಬಹಳ ಹೆಮ್ಮೆ ಎನಿಸಿತು. ಅಲ್ಲಿಗೆ ಬಂದ ಮೌಗ್ಲಿಯು, ಅವರಿಗೆ ಧೈರ್ಯ ಹೇಳಿ, ೩ ಗಾವುದ ದೂರದ ಹಳ್ಳಿಗೆ, ತೋಳಗಳ ಕಾವಲಿನಲ್ಲಿ ಕಳುಹಿಸಿಕೊಟ್ಟನು. ಕೂಡಲೇ ಹಳ್ಳಿಗೆ ಬಂದನು. ಅದೇ ವೇಳೆಗೆ ಬಘೀರನೂ ಬಂದನು. ಸಂಜೆ ಆಗಿತ್ತು. ಆ ಕೂಡಲೇ ಬಘೀರನು ಮೆಸ್ಸವ್ವಳ ಮನೆ ಕಿಟಕಿಯ ಮೂಲಕ ಕೋಣೆ ಸೇರಿ ಮಂಚದ ಮೇಲೆ ಮಲಗಿದನು.

ಬಲದೇವನೂ ಹೋದ ಕೆಲಸ ಸಾಧಿಸದೆ, ಸಂಜೆ ಊರಿಗೆ ಬಂದನು. ಬಂದವನು ಸ್ವಲ್ಪ ಕಾಲ ಬಡಾಯಿ ಕೊಚ್ಚಿದನು. ಆ ಬಳಿಕ ಅವನೂ ಜನರೂ, ಮೆಸ್ಸವ್ವಳನ್ನೂ ಅವಳ ಗಂಡನನ್ನೂ ಸುಟ್ಟು ಹಾಕಲು ಕರೆತರುವುದಕ್ಕಾಗಿ, ಅವರ ಮನೆಗೆ ಹೋದರು. ಬಾಗಿಲು ತೆರೆದರು. ಮೆಸ್ಸವ್ವಳು ಕರಿಚಿರತೆ ಆಗಿದ್ದಾಳೆ–ದೆವ್ವ ಆಗಿದ್ದಾಳೆ. ಅಲ್ಲಿ ಕ್ಷಣಕಾಲ ನಿಲ್ಲದೆ "ದೆವ್ವ, ದೆವ್ವ" ಎಂದು ಅರಚುತ್ತಾ, ತಮ್ಮ ತಮ್ಮ

ಮನೆಗಳಿಗೆ ಓಡಿ ಹೋಗಿ ಬಾಗಿಲು ಭದ್ರಪಡಿಸಿಕೊಂಡರು. (ಜನರು ಮೆಸ್ಸವ್ವಳನ್ನು ಹಿಂಬಾಲಿಸದೆ ಇರಲಿ ಎಂದೇ, ಬಘೀರನು ಕೋಣೆಯೊಳಗೆ ಮಂಚದ ಮೇಲೆ ಮಲಗಿದ್ದುದು.)

ಆವರೆಗೆ ಮೌಗ್ಲಿಯು, ಮನುಷ್ಯರಕ್ತದ ವಾಸನೆ ಹಿಡಿದಿರಲಿಲ್ಲ. ಈಗ ಅದನ್ನು ಮೂಸಿದ್ದಾನೆ. ಅದರಲ್ಲೂ ಹೆತ್ತ ತಾಯಿಯ ರಕ್ತ. ರೋಷ ಉಕ್ಕಿತು. ಅದಕ್ಕೆ ಕಾರಣರಾದ, ಆ ಹಳ್ಳಿಯ ಜನರ ಮೇಲೆ, ಅಷ್ಟೇಕೆ? ಆ ಹಳ್ಳಿಯ ಮೇಲೇ ದ್ವೇಷವುಂಟಾಯಿತು. ತನ್ನ ತಾಯಿಗೆ ಕಷ್ಟಕೊಟ್ಟ ಆ ಹಳ್ಳಿಯನ್ನೇ ನಾಶಮಾಡಲು ನಿಶ್ಚಯಿಸಿದನು.

ಹಾಥಿಯು ಈ ಹಿಂದೆ ಭರತಪುರದ ಜನರ ಕೈಗೆ ಸಿಕ್ಕಿ, ಕಷ್ಟದ ಪಾಲಾಗಿ, ಅಲ್ಲಿಂದ ತಪ್ಪಿಸಿಕೊಂಡು, ಕಾಡಿಗೆ ಬಂದು, ತನ್ನ ಬಂಧುಗಳೊಡನಾಡಿ, ಆ ಊರನ್ನು ನಾಶಮಾಡಿದ್ದುದೂ; ಆ ಸಮಯದಲ್ಲಿ ಅದಕ್ಕಾಗಿದ್ದ ಗಾಯದ ಗುರುತುಗಳನ್ನು ತಾನು ನೋಡಿದ್ದುದೂ, ಮೌಗ್ಲಿಗೆ ನೆನಪಿಗೆ ಬಂತು.



ಕೂಡಲೇ ಹಾಥಿಯನ್ನು ಕರೆಸಿ, ತನ್ನ ತಳಮಳವನ್ನು ವಿವರಿಸಿ, ಈ ದುಷ್ಟ ಜನರ ಊರನ್ನು ನಾಶಮಾಡಬೇಕೆಂದು ಕೋರಿದನು.

ಅಂದಿನಿಂದ ಮೌಗ್ಲಿಯ ಮೇಲೆ ಹಗೆ ಕಾರಿದ, ಅವನಮ್ಮ ಮೆಸ್ಸವ್ವಳನ್ನು ಗೋಳಾಡಿಸಿದ್ದ ಆ ಊರನ್ನು ಆನೆಗಳು ಸುತ್ತುಗಟ್ಟಿದುವು. ಕಾಡಿನ ಬಂಧುಗಳೂ ಜೊತೆ ಸೇರಿದರು.



ಸಸ್ಯಾಹಾರಿ ಪ್ರಾಣಿಗಳಿಂದ ಬೆಳೆ ನಾಶವಾಯಿತು. ಆನೆಗಳು ತೋಟಗಳನ್ನು ಹಾಳುಗೆಡವಿದುವು. ಸಾಹಿ, ಇಕ್ಕಿ, ಬಾಲು ಮೊದಲಾದುವು ಕಾಡಿನಲ್ಲಿ ದನಕರುಗಳಿಗೆ ಮೇವಿಲ್ಲದಂತೆ ಅಡ್ಡಬಂದುವು. ಜನ, ಜಾನುವಾರು, ಹಗಲು ಹೊತ್ತು ಹೊರಬರದಂತೆ ಕ್ರೂರ ಮೃಗಗಳು ಕಾಡಿದುವು. ಊರ ಶೆಟ್ಟಿ ಮಾತ್ರ ತನ್ನ ವ್ಯಾಪಾರ ಲಾಭದಾಯಕವಾಯಿತೆಂದು ಹಿಗ್ಗಿದನು. ಆದರೆ, ಅದೆಷ್ಟು ದಿನ? ಅದೊಂದು ದಿನ ಆನೆಗಳು ನುಗ್ಗಿ ಅವನ ಕಣಜ, ದಾಸ್ತಾನು, ಮನೆ, ಮುಂಗಟ್ಟು ಎಲ್ಲವನ್ನೂ ಹಾಳುಗೆಡವಿದುವು. ಭಟ್ಟನು ಪೂಜೆ ಮಾಡಿ ಕೇಳಿದರೂ ದೇವರು ವರ ಕೊಡಲಿಲ್ಲ. ಕ್ರಮೇಣ ಊರು ಖಾಲಿ ಆಯಿತು. ಊರು ಬಿಟ್ಟವರು ಕಾನೇವಾಡದಲ್ಲಿ ತಿರುಪೆ ಬೇಡಲು ಹೊರಟರು. ಆನೆಗಳು ಮತ್ತೊಮ್ಮೆ ಧಾಳಿಮಾಡಿದುವು. ಕೋಟೆಯನ್ನು ಕೆಡವಿದುವು. ಮನೆಗಳನ್ನು ಉರುಳಿಸಿದುವು. ಗುಡಿಸಲುಗಳನ್ನು ನೆಲಸಮ ಮಾಡಿದುವು.

ಅಲ್ಲಿಂದ ಒಂದೆರಡು ತಿಂಗಳೊಳಗೆ ಊರಿದ್ದ ಕಡೆ ಗಿಡ ಗೆಂಟೆ ಬೆಳೆದುವು. ಅನತಿಕಾಲದಲ್ಲಿ , ಊರು ಇದ್ದುದು ಗುರುತು ಸಿಗದಂತೆ ಕಾಡಿನ ಭಾಗವಾಯಿತು.

## ಹಾಗಲು ಬಳ್ಳಿಯ ಹಬ್ಬಿಸುವೆ
(ಮೌಗ್ಲಿಯು ಹಾಡಿದುದು)

ಬಿರ್ರನೆ ತುಳಿಯುವ ಅಡವಿಯ ತಂದು। ಸರ್ರನೆ ನುಗ್ಗಿಸಿ ಲತೆಗಳಲಿಂದು।
ನಿಮ್ಮೀ ಮಾಳಿಗೆ ಬಿರಿಯುವೆನು। ದಿಮ್ಮೀದೂಲವ ಮುರಿಯುವೆನು।
ಎಲ್ಲವು ನಾಶನವಾದಾ ಮೇಲೆ। ಹಾಗಲು ಬಳ್ಳಿಯ, ಹಬ್ಬಿಸುವೆ॥

ನಿಮ್ಮ ಚಾವಡೀ ಕಟ್ಟೆಯ ಮೇಲೆ। ಕಾಡಿನ ಜೀವರು ಹಾಡುವ ರಾಗ।
ನಿಮ್ಮ ಗಿಡಗಳಲಿ ಬಾವಿಲಿಯೂ। ನಿಮ್ಮಾ ಒಲೆಯಲಿ ಹಾವಿಲಿಯೂ।
ನೀವು ನಿದ್ರೆ ಮಾಡಿದಾ ನೆಲದಲಿ। ಹಾಗಲು ಬಳ್ಳಿಯ ಹಬ್ಬಿಸುವೆ॥

ಕಳುಹುವೆ ಭಟರನು, ಇಲ್ಲಿಗೆ ಬಂದು। ನಿಮ್ಮನು ಬಿಡದೆಲೆ ಹಿಂಸಿಸಲೆಂದು।
ಗಡಿಯಲಿ ಕಲ್ಲನು ಕೆಡಹುವರು। ತೋಳಗಳೀ ಕಡೆ ಕಾಡುವರು।
ನೀವು ಹಾಡಿಕುಣಿದಾ ನೆಲದಲ್ಲಿ। ಹಾಗಲು ಬಳ್ಳಿಯ ಹಬ್ಬಿಸುವೆ॥

ನಿಮ್ಮನು ಮುರಿಯಲು ಗಂಟೂ ಗಿಡಗಳನೇ ಕಳುಹಿರುವೆ।
ನಿಮ್ಮಾ ಮನೆಮಾಳಿಗೆ ಕೂಲುತಿರೆ। ವನವದು ಎಲ್ಲೆಡೆ ಬೆಳೆಯುವುದು।
ನೀವು ಮೆರೆದಾ ನೆಲದಲ್ಲೆಲ್ಲಾ। ಹಾಗಲು ಬಳ್ಳಿಯ ಹಬ್ಬಿಸುವೆ॥

ಹಬ್ಬಿಸುವೇ ನಾ ಹಬ್ಬಿಸುವೇ। ಹಾಗಲು ಬಳ್ಳಿಯ ಹಬ್ಬಿಸುವೇ।
ಹಬ್ಬಿಸುವೇ ನಾ ಹಬ್ಬಿಸುವೇ। ಹಾಗಲು ಬಳ್ಳಿಯ ಹಬ್ಬಿಸುವೇ॥

---

*ಸೂಚನೆ : "ಹಾಗಲು ಬಳ್ಳಿಯ ಹಬ್ಬಿಸುವೇ" ಪದಗಳನ್ನು 2-3 ಬಾರಿ ಹೇಳಬೇಕು.*

# ಪ್ರಸಂಗ 6

## ರಾಜಾಂಕುಶ

ಮೌಗ್ಲಿಯನ್ನು ರಕ್ಷಿಸಿದ ದಿನ ಮೊದಲು, 'ಕಾ' ಅವನೊಡನೆ ಸ್ನೇಹ ವಿಶ್ವಾಸಗಳನ್ನು ಬೆಳೆಸಿಕೊಂಡಿತು. ದಿನೇ ದಿನೇ ಅದು ಹೆಚ್ಚುತ್ತಾ ಹೋಯಿತು. ಸಾಮಾನ್ಯವಾಗಿ ಇಬ್ಬರೂ ಪ್ರತಿದಿನವೂ ಆಟವಾಡಿಕೊಳ್ಳುತ್ತಿದ್ದರು. ಮಧ್ಯೆ ಮಧ್ಯೆ 'ಕಾ' ತನ್ನ ಮೂತಿಯಿಂದ ಅದೆಷ್ಟೋ ನಯವಾಗಿ, ವಾತ್ಸಲ್ಯದಿಂದ ಮುತ್ತಿಡುತ್ತಿದ್ದಿತು, ತಟ್ಟಿ ಮಲಗಿಸುತ್ತಿದ್ದಿತು. ಅದೊಂದು ದಿನ 'ಕಾ' ಪೊರೆಬಿಟ್ಟು ಮಿನುಗುವ ಮೈಯಿಂದ, ಶುಭ್ರವಾಗಿ ಕಂಡಾಗ ಮೌಗ್ಲಿಯು ಬಹಳವಾಗಿ ಮೆಚ್ಚಿಕೊಂಡನು. ಕೊಳಕು ಮೈ ತೊಳೆಯುವುದೇ ಮುಂತಾದ ಆರೋಗ್ಯವಿಚಾರಗಳನ್ನು ಹೇಳಿಕೊಳ್ಳುತ್ತಿದ್ದನು. ಮನುಷ್ಯರ ಮಧ್ಯದ ತನ್ನ ಅನುಭವಗಳನ್ನು ನೆನೆಸಿಕೊಂಡನು. ಮನುಷ್ಯರು ಮಣ್ಣಿನ ಬೋನಿನೊಳಗೆ ಸೇರಿಕೊಂಡು, ನಿರ್ಮಲವಾದ ಗಾಳಿಗೆ ಅಡ್ಡಹಾಕಿ ಕಲುಷಿತ ಗಾಳಿ ಸೇವಿಸುವುದು; ಸಾಲದೆಂಬಂತೆ ಕೊಳಕು ಬಟ್ಟೆಯಿಂದ ಮುಸುಕು ಹಾಕಿ ಕೊಳ್ಳುವುದು; ವಿಕಾರವಾಗಿ ಹಾಡು ಹೇಳಿಕೊಳ್ಳುತ್ತಾ ಮಲಗುವುದು ಇತ್ಯಾದಿ. ತಾನಾದರೋ ನಿರ್ಮಲವಾದ ಬಯಲಿನಲ್ಲಿರುವುದು ಅದೃಷ್ಟವೆಂದು ಭಾವಿಸಿರುವುದನ್ನೂ, ಅದೇ ಹೆಚ್ಚು ಸುಖಕರವೆಂದೂ ನೆನೆದನು. ಜೊತೆಗೆ ಬೇಟೆಯಾಡಲು ಇನ್ನೂ ಹುಲಿಗಳಿದ್ದಿದ್ದರೆ ಸರಿ ಹೋಗುತ್ತಿತ್ತೆಂದೂ, ಬೇರೆ ಯಾವ ಆಸೆಯೂ ಇಲ್ಲವೆಂದೂ ಹೇಳಿಕೊಂಡನು.

ಆಗ 'ಕಾ' ಹೇಳಿತು. ಬಂದರ್‌ಗಳೊಡನೆ ಸೇರಿ, ಅವನು (ಮೌಗ್ಲಿ) ಸೆರೆಯಾಗಿದ್ದ ಶೀತಗೃಹದ ನೆಲಮಾಳಿಗೆಯಲ್ಲಿ, ಬಿಳಿನಾಗರ (ಶ್ವೇತ ಫಣಿ– White hood) ವಾಸವಾಗಿದೆ ಎಂದೂ, ಅಲ್ಲಿ ಮನುಷ್ಯರು ಅಮೂಲ್ಯವೆಂದು ಭಾವಿಸುವ, ಲಕ್ಷಾಂತರ ರೂಪಾಯಿ ಬೆಲೆ ಬಾಳುವ, ರತ್ನಖಚಿತ ವಸ್ತುಗಳು, ಚಿನ್ನ ಬೆಳ್ಳಿ, ವಜ್ರ ವೈಢೂರ್ಯಗಳ ರಾಶಿಯೇ ಇರುವುದೆಂದೂ,



ನೋಡುವುದಾದರೆ ತಾನು ಮೌಗ್ಲಿಯನ್ನು ಕೊಂಡೊಯ್ದು ತೋರಿಸುವುದಾಗಿಯೂ ತಿಳಿಸಿತು. ಅಂತಹ ಉತ್ತಮ ವಸ್ತುವನ್ನು ನೋಡುವ ಕುತೂಹಲದಿಂದ ಒಪ್ಪಿ ಮೌಗ್ಲಿಯು 'ಕಾ' ಜೊತೆ ಹೊರಟನು.

ಶೀತಗೃಹ ತಲುಪಿದವರು, ಅಲ್ಲಿನ ಸಂದುಗೊಂದುಗಳಲ್ಲಿ ದೂರುತ್ತಾ, ಬೇಕಾಗಿ ಬಂದೆಡೆ ತೆವಳುತ್ತಾ, ಸುಮಾರು ಹೊತ್ತು ಕಳೆದ ಮೇಲೆ, 'ಕಾ' ಹೇಳಿದ ಕತ್ತಲು ಕತ್ತಲಾದ ಪ್ರದೇಶವನ್ನು ತಲುಪಿದರು. ಆ ಗಾಢಾಂಧಕಾರದಲ್ಲಿ ಮೌಗ್ಲಿಯ ತೀಕ್ಷ್ಣದೃಷ್ಟಿ ಹರಿದಾಡಿತು. ಅಲ್ಲಿ ಅವನು ಕಂಡದ್ದೇನು? ನೂರಾರು ವರ್ಷಗಳಿಂದ ಬೆಳೆದ ಕಾಡು ಮರಗಳ ಬೇರುಗಳು; ಒಸರುತ್ತಿರುವ ತೇವದಿಂದ ಕೂಡಿದ ಝುರಿಗಳು; ಬಿರಿಯುತ್ತಿರುವ ಗೋಡೆಗಳು; ಕೊಳೆತ ತೇವದ ಮೂಲದಲ್ಲಿ ಹೊರಟ ನಾಯಿಕೊಡೆಗಳು, ಅಣಬೆಗಳು; ಪಾಚಿಕಟ್ಟಿ ಜಾರುವ ನೆಲ; ಇನ್ನೂ ಕಣ್ಣಿಟ್ಟು ನೋಡಿದಾಗ ಅಲ್ಲೊಂದು ಬಿಳಚಿಕೊಂಡು ಮೈಚಾಚಿರುವ ಕೃಷ್ಣಸರ್ಪ. ವಿನಯ ಶೀಲನಾದ ಮೌಗ್ಲಿಯೂ, ಗಂಭೀರನಾದ 'ಕಾ'ನೂ, ಸರ್ಪಭಾಷೆಯಲ್ಲಿ ವಂದಿಸಿ, ಒಸಗೆ ಹಾಡು—ದೇವರ ಮಕ್ಕಳು .... ಹೇಳಿದರು. ಆ ಸರ್ಪವು ವಂದನೆಯನ್ನು ಸ್ವೀಕರಿಸಿ, ಬಂದಿರುವ ಉದ್ದೇಶವನ್ನು ವಿಚಾರಿಸಿತು. ಇವರು ಹೇಳಿದರು.

ಆ ಕೃಷ್ಣಸರ್ಪದ ಹೆಸರು ಬಿಳಿನಾಗರ–ಶ್ವೇತ ಫಣಿ. ಬಹಳ ಹಿಂದೆ, ಆ ಅರಮನೆಯಲ್ಲಿ ವಾಸಿಸುತ್ತಾ, ರಾಜ್ಯವನ್ನಾಳಿದ ಯಾಗಸೂರಿವಂಶದ ಚಂದ್ರಬೀಜನ ಮಗನಾದ ಸಲೋಂಬುಧಿ ಮಹಾರಾಜ ಬಾಪ್ಪಾರಾವಳನ ಕಾಲದಿಂದಲೂ, ತಾನು ಈ ಖಜಾನೆಯ ಕಾವಲಿರುವುದಾಗಿ ಆ "ಬಿಳಿನಾಗರ"ನು ತಿಳಿಸಿ, ಒಳಗೆಲ್ಲಾ ಓಡಾಡಿ ಐಶ್ವರ್ಯವನ್ನು ಪರಿಕಿಸಲು ಅನುಮತಿಸಿತು.



ಅನಾದಿಕಾಲದಿಂದ ರಾಜರುಗಳು ಶೇಖರಿಸಿಟ್ಟಿದ್ದ ಮಣಗಟ್ಟಲೆ ಬಂಗಾರ; ಚಿನ್ನದ ಆಭರಣಗಳ ಸಮೂಹ; ನವರತ್ನಗಳು; ಶ್ರೇಷ್ಠ ರೀತಿಯ ರತ್ನಖಚಿತವಾದ, ಪರಿಭೂಷಿತ ದಂತ ಚಂದನ ವಸ್ತುಗಳು, ಆಭರಣಗಳು, ಆಯುಧಗಳು,

ಉಪಕರಣಗಳು; ವಿಗ್ರಹಗಳು; ರಾಶಿರಾಶಿ ಹಣ—ಹೀಗೆ ಆ ಖಜಾನೆಯು ತುಂಬಿ ತುಳುಕುತ್ತಿದ್ದಿತು. ಕತ್ತಲಿನಲ್ಲೂ ಕೋರೈಸುವ ಐಶ್ವರ್ಯರಾಶಿ; ವಂಶಪಾರಂಪರ್ಯ ಅದನ್ನು ಕಾಯುತ್ತಾ ಬಂದಿರುವ 'ಬಿಳಿನಾಗರ'ನು ಅಲ್ಲಿ ನಿವಾಸಿ; ಇದೆಲ್ಲವನ್ನೂ ಕಂಡು ಮೌಗ್ಲಿ ಮತ್ತು 'ಕಾ' ದಿಗ್ಭ್ರಮೆಗೊಂಡರು. ಶತಮಾನ ಕಾಲ "ಬಿಳಿನಾಗರ"ನು ಅಲ್ಲಿ ಕಾವಲಿರುವ ಬಗ್ಗೆ ಆಶ್ಚರ್ಯ ವ್ಯಕ್ತಪಡಿಸಿದರು. ಬಹುಕಾಲದ ಹಿಂದೆ ಇಲ್ಲಿ ಆಳಿ ಅಳಿದ ರಜಪೂತರ ಬಗ್ಗೆ, ಕೊನೆಯ ಮಹಾರಾಜ ಕರ್ಣರಾಜನ ಬಗ್ಗೆ, ರಾಜ್ಯವು ನಾಶವಾಗಿ ಅರಮನೆಯು ಪಾಳುಬಿದ್ದು, ಅಡವಿಯು ಹಬ್ಬಿರುವ ಬಗ್ಗೆ ಎಷ್ಟೇ ಹೇಳಿದರೂ ಭಗ್ನಾವಶೇಷಗಳನ್ನೂ, ಮರಗಳ ಬೇರುಗಳಿಂದ ಬಿರಿಯುತ್ತಿರುವ ಗೋಡೆಗಳನ್ನೂ ತೋರಿಸಿದರೂ ಸಹ "ಬಿಳಿನಾಗರ"ವು ಗತಿಸಿರುವ ಕಾಲದ ಬಗ್ಗೆ ನಂಬಲಿಲ್ಲ. ಈ ಮುಂಚೆ 3-4 ಬಾರಿ ದರೋಡೆಕಾರರು, ಕೊಳ್ಳೆಹೊಡೆಯಲು ಬಂದಿದ್ದಾಗ, ಅವರನ್ನು ಕಚ್ಚಿ ಸಾಯಿಸಿದ್ದನ್ನೂ ಅವರ ದೇಹಗಳು ಕೊಳೆತು, ನಾರಿ ಎಲುಬುಗೂಡು ರಾಶಿಯು ಬಿದ್ದಿರುವುದನ್ನು ಕಾಣಿಸಿದರೂ, ಬಿಳಿನಾಗರವು ಯಾವುದರ ಪರಿವೆಯೂ ಇಲ್ಲದಂತಿತ್ತು.

ಅಲ್ಲಿದ್ದ ಯಾವೊಂದು ಅಮೂಲ್ಯ, ಅನರ್ಘ್ಯ ವಸ್ತುವಾಹನವೂ ಮೌಗ್ಲಿಗೆ ಅರ್ಥ ಆಗಲಿಲ್ಲ. ಆದರೆ ದಂತದ ಹಿಡಿಯ, ರತ್ನಭೂಷಿತವಾದ, ಬಂಗಾರದ ಆನೆಗಳು ಇರುವ "ರಾಜಾಂಕುಶ"ವು ಮೌಗ್ಲಿಯ ಗಮನ ಸೆಳೆಯಿತು. ಅವನು ಅದನ್ನು ಕೈಗೆತ್ತಿಕೊಂಡನು. "ಅದು ಹೋದ ಕಡೆಯಲ್ಲೆಲ್ಲಾ ಸಾವು ಬೆನ್ನಟ್ಟುತ್ತದೆ, ಜೋಕೆ" ಎಂದು ಬಿಳಿನಾಗರನು ಎಚ್ಚರಿಕೆ ನೀಡಿದನು. ಹಾಗೆ ಎಚ್ಚರಿಸಿ, ತಾನು ಆ ಮನುಷ್ಯಮರಿಗೆ ಬಹಳ ಉಪಕಾರ ಮಾಡಿರುವುದಾಗಿ ಹೇಳಿಕೊಂಡಿತು. ಕೂಡಲೇ ಮೌಗ್ಲಿಗೂ, ಬಿಳಿನಾಗರಕ್ಕೂ ತಮ್ಮ ಬಲಾಬಲಗಳ ಮೇಲೆ ಜಗಳ ಹುಟ್ಟಿ, ಕಾದಾಟವಾಗಿ, ಮೌಗ್ಲಿಯು ಅದೇ ಅಂಕುಶದಿಂದ, ನಾಗರವನ್ನು ಗಾಯಗೊಳಿಸಿ, ನಿಶ್ಶಕ್ತಮಾಡಿ, ವಿಷದ ಕೋರೆಹಲ್ಲುಗಳನ್ನು ಕಿತ್ತುಹಾಕಿದನು. ಬಿಳಿನಾಗರನು ಅಸಹಾಯಕನಾಗಿ, ಕೋಪ, ನಾಚಿಕೆ, ಅವಮಾನಗಳಿಂದ ಉದ್ವಿಗ್ನನಾಗಿ ಬುಸುಗುಡುತ್ತಾ ಒದ್ದಾಡುತ್ತಿದ್ದನು. ಮೌಗ್ಲಿಯು ಆ ರಾಜಾಂಕುಶವನ್ನು ಹಿಡಿದು, "ಕಾ"ನ ಜೊತೆ ಹೊರಬಂದನು.

ಮೌಗ್ಲಿಯು, ಆ ಅಂಕುಶವನ್ನು ಬಘೀರನಿಗೆ ತೋರಿಸಿದನು. ಅದು ಆನೆಗಳನ್ನು ತಿವಿದು ಕೆಲಸಮಾಡಿಸಲು, ಮಾವುತರು ಉಪಯೋಗಿಸುವ ಆಯುಧ. ಅದರ ಮೇಲಿರುವ ಒಂದೊಂದು ರತ್ನದ ಹರಳಿಗಾಗಿ, ಜನರು ಹೋರಾಡಿ ಸಾಯುತ್ತಾರೆ ಎಂದು ಬಘೀರನು ಹೇಳಿದನು. ಮೌಗ್ಲಿಗೆ ಅದು ಅರ್ಥವಾಗಲಿಲ್ಲ. ತನ್ನಮ್ಮ ಮೆಸ್ಸವ್ವಳ ರಕ್ತದಿಂದ, ಕಲಕಿದ ಮನಸ್ಸಿನವನಾಗಿದ್ದ ಅವನು ಪುನಃ ರಕ್ತದ ಹೆಸರು ಕೇಳಿ, ಕ್ಷೋಭೆಗೊಂಡು, ಆ ರಾಜಾಂಕುಶವನ್ನು ಬಹುದೂರ ಬೀಸಿ ಎಸೆದನು. ಆ ಬಳಿಕ ಹಸಿವು ಹಿಂಗಿಸಿಕೊಂಡು, ನೀರು ಕುಡಿದು, ಮರದ ಮೇಲೆ ಮಲಗಿದನು.

ಅಚೇತನವಾದ ಆ ವಸ್ತುವು ಹೇಗೆ ಮನುಷ್ಯನನ್ನು ಕೊಲ್ಲಲು ಸಾಧ್ಯ ಎಂಬುದು ಅವನಿಗೆ ಬಗೆ ಹರಿಯಲಿಲ್ಲ.

ನಿದ್ದೆ ಮುಗಿದು ಎಚ್ಚೆತ್ತ ಅವನಿಗೆ, ದೂರಕ್ಕೆ ಎಸೆದಿದ್ದ ಅಂಕುಶವು ಕಾಣಲಿಲ್ಲ. ನೆಲದ ಮೇಲಿನ ಜಾಡುಹಿಡಿದು, ಬೇಡನೊಬ್ಬನು ಅದನ್ನೆತ್ತಿಕೊಂಡು, ಮತ್ತೊಬ್ಬನಿಗೆ ಸಿಗದಂತೆ ಓಡಿಹೋಗಿರುವುದನ್ನು ಊಹಿಸಿದನು. ಬಘೀರನೂ, ಮೌಗ್ಲಿಯೂ ಜಾಡು ಹಿಡಿದು ಹೊರಟರು.

ಸ್ವಲ್ಪ ದೂರದಲ್ಲಿ ಒಬ್ಬ, ಅಲ್ಲಿಂದ ಮುಂದೆ ಮತ್ತೊಬ್ಬ, ಮತ್ತೂ ಮುಂದೆ ಮಗದೊಬ್ಬ, ಅಲ್ಲಿಗೆ ನಿಲ್ಲದೆ ಅಲ್ಲಿಂದ ಅನತಿ ದೂರದಲ್ಲಿ ನಾಲ್ಕಾರು ಮಂದಿ ಸತ್ತು ಬಿದ್ದಿದ್ದರು. ಕಡೆಯಲ್ಲಿ ಕಂಡ ಹೆಣಗಳ ರಾಶಿಯ ಮಧ್ಯೆ "ರಾಜಾಂಕುಶ"ವು ಕಣ್ಣುಕೋರೈಸುವಂತೆ ಹೊಳೆಯುತ್ತಿತ್ತು. ಆದರೂ ಅವರೆಲ್ಲ ಏಕೆ ಸತ್ತಿದ್ದಾರೆ? ಅವರ ಸಾವಿಗೂ, ಅಂಕುಶಕ್ಕೂ ಏನು ಸಂಬಂಧ? ಮೌಗ್ಲಿಗೆ ಹೊಳೆಯಲಿಲ್ಲ. ಅಂಕುಶದಲ್ಲಿ ಹೊಚ್ಚಿರುವ ರತ್ನಗಳ ಆಸೆಗಾಗಿ ಒಬ್ಬರಿಗೊಬ್ಬರು ಕಾದಾಡಿ ಸತ್ತಿದ್ದಾರೆ. ಪರಸ್ಪರ ವಿಷಾಹಾರವನ್ನು ಉಣಿಸಿದ್ದಾರೆ. ಹಾಗಾಗಿ ಪರಸ್ಪರ ಮೋಸಮಾಡಿದ, ವಿಷಾಹಾರ ಸೇವನೆಯೋ, ರತ್ನಖಚಿತ ಅಂಕುಶಕ್ಕಾಗಿ ನಡೆದ ಕಾದಾಟವೋ, ಹಂಸಕ್ಷೀರ ನ್ಯಾಯದಂತೆ, ಮೌಗ್ಲಿಗೆ ಬೇಧಿಸಲಾಗಲಿಲ್ಲ.



ಹೇಗಾದರಾಗಲೀ, ಹೋದ ಕಡೆ ಮುಟ್ಟಿದವರನ್ನು ಸಾಯಿಸುವ ಈ ಅಂಕುಶವು ಭೂಮಿಯ ಮೇಲಿರಬಾರದೆಂದು ಹೇಳಿ, ಹಳ್ಳತೋಡಿ, ಅದನ್ನು

ಹೂತಿಟ್ಟು ತನ್ನ ಕೆಲಸಕ್ಕೆ ಹೋದನು. ಎರಡು ದಿನಗಳಾದರೂ, ವ್ಯಗ್ರಗೊಂಡ ಮನಸ್ಸು ಸ್ಥಿಮಿತಕ್ಕೆ ಬರಲಿಲ್ಲ.

ಹಾಗಾಗಿ ಎರಡು ದಿನಗಳ ಬಳಿಕ ಮತ್ತೆ ಅಲ್ಲಿಗೆ ಬಂದು, ಅಂಕುಶವನ್ನು ಹೊರತೆಗೆದು, ಶೀತಗೃಹ ಸೇರಿದನು. ಅದನ್ನು ಕೈಗೆತ್ತಿಕೊಂಡ ನೆಲಮಾಳಿಗೆಯಲ್ಲಿ ಅದನ್ನು ಎಸೆದನು. ನರಳುತ್ತಾ ಮಲಗಿದ್ದ ಬಿಳಿನಾಗರವನ್ನುದ್ದೇಶಿಸಿ "ನಾಗಣ್ಣಾ, ಕ್ಷಮಿಸು. ನಾನು ಮೌಗ್ಲಿ. ತಪ್ಪು ಮಾಡಿದೆ. ನಿನ್ನನ್ನು ಗಾಯಗೊಳಿಸಿದೆ. ನೀನು ಹೇಳಿದ್ದು ನಿಜ. ಹೋದ ಕಡೆಯಲ್ಲೆಲ್ಲಾ ಇದು ಜನರನ್ನು ಕೊಂದುಹಾಕಿತು. ಅದೇ ಕಾರಣ ಇರಬೇಕು. ನಿನ್ನನ್ನೂ ಗಾಯಗೊಳಿಸಿ, ಒಂದೇ ದಿನದಲ್ಲಿ 10 ಜನರನ್ನು ಸಾಯಿಸಿತು. ಮತ್ತೊಮ್ಮೆ ಕ್ಷಮಾಪಣೆ ಕೇಳುತ್ತೇನೆ. ನಿನ್ನನ್ನು ಗಾಯಗೊಳಿಸಿ ತಪ್ಪು ಮಾಡಿದೆ. ಮತ್ತೆ ಈ ಅಂಕುಶವು ಹೊರಬರದಿರಲಿ. ನಿನಗೂ ವಯಸ್ಸಾಗಿದೆ. ಪ್ರಾಯದ ನಾಗರವನ್ನು ಕಾವಲಿರಿಸು. ನನಗಂತೂ ಈ ಸಮಸ್ಯೆ ಬಗೆ ಹರಿಯದು. ನಾನು ಚಿಕ್ಕವನು. ಕ್ಷಮಿಸು" ಎಂದು ವಿದಾಯ ಹೇಳಿದನು. ಬಿಳಿನಾಗರವು ತಲೆಹಾಕುತ್ತಿದ್ದಂತೆಯೇ, ವಂದಿಸಿ, ಅಲ್ಲಿಂದ ಓಡಿದನು.

## ಭಯವೇ ಅವನು, ಅವನೇ ಭಯವು, ತಿಳಿಯುವುದು
### (ಕಿರಿಯ ಬೇಟೆಗಾರನ ಹಾಡು)

**ಬಂದರ್‌ಲೋಗ್ ಕಿರುಚುವ ಮುಂಚೆ।**
**ಮೋರ್ ನವಿಲು ಹಾಡುವ ಮುಂಚೆ।**
**ಮೇಲಿಂದಾಹಾರಕೆ, 'ಛೀಲ್' ರಣಹದ್ದು ಜಾರುವ ಬಹು ಮುಂಚೆ।**
**ಕಾಡಲಿ ಸುಯ್ಯೆಂದು, ಮೌನದಿ ನುಸುಳುತ ಚಲಿಸುವ ನೆರಳೊಂದಿರುವುದು।**
**ಕಿರಿಯ ಬೇಟೆಗಾರ! ನೀ ಕೇಳು,**
**ಭಯವೇ ಅವನು, ಅವನೇ ಭಯವು ತಿಳಿಯುವುದು॥**

**ಮರಗಳ ನಡುವೆ, ಮೆಲ್ಲನೆ ನಡೆಯುವ,**
**ಕಾಯುತ ಹೊಂಚುವ ನೆರಳೊಂದಿರುವುದು ತಿಳಿಯುವುದು।**
**ಕಾಡಿನೊಳೆಲ್ಲಾ ಓಡುತ, ಚಿಮ್ಮುತ, ಥಟ್ಟನೆ**
**ಎಗರುತ ಕ್ಷಣದಲಿ ಸುದ್ದಿಯು ಹರಡುವುದು।**
**ಜೊತೆಯಲಿ ಚಲಿಸುತ ಈಗಲು ಇರುವನು,**
**ನಿನ್ನಯ ಹಣೆಯದು ಬೆವತಿದೆ ನೋಡು॥**
**ಕಿರಿಯ ಬೇಟೆಗಾರ! ನೀ ಕೇಳು,**
**ಭಯವೇ ಅವನು, ಅವನೇ ಭಯವು ತಿಳಿಯುವುದು॥**

ಚಂದ್ರನು ಗಿರಿಶಿಖರವನೇರುವ ಮುಂಚೆ। ಬಂಡೆಕಲ್ಲು ಬೆಳಗುವ ಮುಂಚೆ।
ಕೆಳಗಡೆ ಇಳಿಯುವ ನೆರಳದು ತಣ್ಣಗೆ, ಕಳೆಗುಂದಿ ಮಾಯವಾಗುವ ಮುಂಚೆ।
ರಾತ್ರಿಯೋಳಿದು, ನಿನ್ನ ಬೆನ್ನಟ್ಟುತ।
    ಸಿರಿ ಸಿರಿ ಸಿರಿ ಸಿರಿ ಎಂದು ಬರುತ್ತಲಿತ್ತೇಳು।
ಕಿರಿಯ ಬೇಟೆಗಾರ! ನೀ ಕೇಳು,
    ಅವನೇ ಭಯವು, ಭಯವೇ ಅವನು ತಿಳಿಯುವುದು॥

ಮೊಣಕಾಲೂರು, ಎಳೆ-ಬಿಲ್ಲಿನ ನಾರು, ಕಯ್ಯೆಂದು ನೀ ಬಾಣವ ತೂರು।
ಪೊದೆಯೊಳು ಅಡಗಿಹ, ಪೊಳ್ಳುಕಳ್ಳನನು, ಈಟಿಯಲಿ ತಿವಿದು ನೋಡು।
ನಿನಗೇನಾಗಿದೆ? ಕೈಯದು ಕುಂದಿದೆ, ಮುಖವದು ಬಿಳಿಚಿದೆ ಏಕೆ?
ಕಿರಿಯ ಬೇಟೆಗಾರ! ನೀ ಕೇಳು,
    ಅವನೇ ಭಯವು, ಭಯವೇ ಅವನು ತಿಳಿಯುವುದು॥

ಮೋಡಗಳೋಡುತ, ಬಿರುಗಾಳಿ ಬೀಸುತ, ಹೆಮ್ಮರಗಳು ನೆಲಕೆ ಉರುಳುತಿವೆ।
ಕಣ್ಣನು ಕುಕ್ಕುವ, ಕಿವಿಗಡಚಿಕ್ಕುವ, ಮಿಂಚು,
    ಸಿಡಿಲು ಜೊತೆಯಲಿ, ಮಳೆ ಬರುತಲಿದೆ।
ಗುಡುಗಿನ ಆರ್ಭಟ, ಬೆನ್ನತ್ತಿ ಬರುತಿಹ ಮರುದನಿಯನು ನೀ ಕೇಳುವುದು।
ಕಿರಿಯ ಬೇಟೆಗಾರ! ನೀ ಕೇಳು,
    ಭಯವೇ ಅವನು, ಅವನೇ ಭಯವು, ತಿಳಿಯುವುದು॥

ಹಳ್ಳ, ತೊರೆಗಳು, ಉಕ್ಕಿ ಹರಿಯುತ ಮೊರೆಯುತಿವೆ।
    ಕಲ್ಲು ಗುಂಡುಗಳತ್ತಿತ್ತ ಹೊರಳುತಿವೆ।
ಥಿಳ್ಳನೆ ಮಿಂಚಿನ ಬಳ್ಳಿಯು ಹೊಳೆಯುತ,
    ಎಲೆಗಳ ಗೆರೆಯನು ತೋರುತಿದೆ।
ನಿನಗಾದರೋ ಗಂಟಲು ಕಟ್ಟಿದೆ, ನಾಲಿಗೆ ಒಣಗಿದೆ,
    ಎದೆಯದು ಡವಡವ ಬಡಿಯುತಿದೆ।
ಕಿರಿಯ ಬೇಟೆಗಾರ! ನೀ ಕೇಳು,
    ಭಯವೇ ಅವನು, ಅವನೇ ಭಯವು ತಿಳಿಯುವುದು॥

---

*ಸೂಚನೆ : "ಭಯವೇ ಅವನು, ಅವನೇ ಭಯವು ತಿಳಿಯುವುದು" ಪದಗಳನ್ನು 2 ಬಾರಿ ಹೇಳುವುದು.*

# ಪ್ರಸಂಗ 7

# ಕೆಂಪು ನಾಯಿ (ಢೋಲ್)

ಊರನ್ನು ಕಾಡು ಮಾಡಿದ ಬಳಿಕ, ಮೌಗ್ಲಿಯು ತನಗೆ ಉಪಕಾರ ಮಾಡಿದ ಎಲ್ಲರಿಗೂ ಸಹಾಯ ಮಾಡಿದನು. ಸಹಜವಾಗಿ ಇದರಿಂದ ಅವನಿಗೆ ಆನಂದ ವಾಯಿತು. ಮಾಂಡಲದ ಹುಚ್ಚಾನೆಯನ್ನು ಕಂಡು ಮರುಗಿದನು. ಜಕಾಲ ಎಂಬ ಮೊಸಳೆಯೊಂದಿಗೆ ಹೋರಿ, ತನ್ನ ಹರಿತವಾದ ಚಾಕುವನ್ನು ಮುರಿದುಕೊಂಡನು. ಕಾಡುಹಂದಿಯೊಂದು ಮನುಷ್ಯನೊಬ್ಬನನ್ನು ಕೊಂದುಹಾಕಿತು. ಕೂಡಲೇ ಆ ಮನುಷ್ಯನ ಹತ್ತಿರ ಇದ್ದ ಚಾಕುವನ್ನು ತೆಗೆದು ಆ ಹಂದಿಯನ್ನು ಸಾಯಿಸಿದನು. ಆ ಚಾಕುವನ್ನು ತನ್ನ ಕತ್ತಿನಲ್ಲಿ ಧರಿಸಿದನು. ಹಾಥಿಯು ಮನುಷ್ಯರ ಕೈಗೆ ಸಿಗದಂತೆ ಕಾಪಾಡಿದನು. ಮತ್ತೊಮ್ಮೆ ಚಿರತೆಯು ಬೋನಿನಲ್ಲಿ ಸಿಕ್ಕಿ ಬಿದ್ದಿದ್ದಾಗ ರಕ್ಷಿಸಿದನು. ಒಮ್ಮೆ ಹಾಥಿಯು ಮೌಗ್ಲಿಯನ್ನು ಕಾಪಾಡಿತು. ಹೀಗೆ ಅನೇಕ ಘಟನೆಗಳು ಮೌಗ್ಲಿಯು ಕಾಡಿನಲ್ಲಿರುವಾಗ, ಒಂದಲ್ಲ ಒಂದು ನಡೆಯುತ್ತಲೇ ಇದ್ದುವು.



ತೋಳರಾಯನೂ, ತಾಯಿ ತೋಳ ರಕ್ಷಾವೂ, ವಯಸ್ಸಾಗಿ ತೀರಿಕೊಂಡುವು. ನಾಲ್ವರು ಬೂದಣ್ಣ ಸೋದರರೂ ಬಲಿತರು. ಅಕೇಲನೋ ವಯೋಭಾರದಿಂದ ಕುಗ್ಗಿದ ಕಾರಣ, ಮೌಗ್ಲಿಯೇ ಅದಕ್ಕೆ ಆಹಾರವನ್ನು ಪೂರೈಕೆ ಮಾಡುತ್ತಿದ್ದನು. ಬಾಲೂ, ಬಘೀರರಿಗೂ ವಯಸ್ಸಾಗಿ ಮುದುಕರಾದರು. ಅಕೇಲನ ಬುದ್ಧಿವಾದ ದಂತೆ, ಪ್ರಾಯದ ತೋಳಗಳು, ಫಯೋನ ತೋಳದ ಮಗ ಫಯೋವಾನನ್ನು

ಮುಂದಾಳು ಮಾಡಿಕೊಂಡು ಹಾಯಾಗಿದ್ದುವು. ಸಾಧಾರಣವಾಗಿ ಅಕೇಲ ಮತ್ತು ಮೌಗ್ಲಿ, ಹಿಂಡಿನ ಸಭೆಗೆ ತಪ್ಪದೆ ಹಾಜರಾಗುತ್ತಿದ್ದರು.

ಷೇರ್‌ಖಾನನು ಸತ್ತ ಬಹಳ ದಿನಗಳ ಮೇಲೆ, ಇದ್ದಕ್ಕಿದ್ದಂತೆ ಒಂದು ದಿನ "ಫೀಯಲು" (ಎಂದರೆ ದೈನ್ಯದ ಭೀಷಣವಾದ ಕೂಗು) ಕೇಳಿಬಂದಿತು. ಅದು ಮುಂಬರಲಿರುವ ಹತ್ಯಾಕಾಂಡದ ಗುರುತು. ಆ ಕೂಗಿನ ಹಿಂದೆಯೇ ಪೃಷ್ಠಭಾಗದಲ್ಲಿ ಗಾಯಗೊಂಡು, ರಕ್ತವು ಸೋರುತ್ತಿದ್ದ ತೋಳವೊಂದು ಓಡಿಬಂದಿತು. ತಾನು "ಒಂಟೆಲ್ಲಾ" (ಒಂಟಿ ತೋಳ) ಎಂದು ಪರಿಚಯ ಮಾಡಿಕೊಂಡಿತು. ತನ್ನಂತಹ ಒಂಟಿ ತೋಳಗಳು, ಡೆಕ್ಕನ್ ಪ್ರದೇಶದಲ್ಲಿ ಸಾಕಷ್ಟಿವೆಯೆಂದೂ, ಅಲ್ಲಿನ ಕೆಂಪುಸೀಳು ನಾಯಿಗಳ ಗುಂಪು ನುಗ್ಗಿ ಬಂದು ತನ್ನ ಹೆಂಡತಿ ಮಕ್ಕಳನ್ನು ಸಾಯಿಸಿತೆಂದೂ ಹೇಳಿತು. ತನ್ನನ್ನು ಬದುಕಿಯೂ ಸತ್ತಂತೆ ಮಾಡಿವೆ ಎಂದೂ ತಿಳಿಸಿತು. ಆ ಕೆಂಪು ನಾಯಿಗಳ ಗುಂಪು ವೇಣುಗಂಗಾ ಅಡವಿಗೆ ನುಗ್ಗಿ ಬರುತ್ತಿರುವುದಾಗಿ ತಿಳಿಸಿತು. ಮುಂದುವರೆದು ಆ ಕೆನ್ನಾಯಿಗಳ ಗುಂಪು ಮಹಾಕ್ರೂರಿಗಳೆಂದು ಒರಲಿತು. ಆದ್ದರಿಂದ ಅವುಗಳ ಕೈ ಬಾಯಿಗೆ ಸಿಗದಂತೆ, ಜಾಗ ಬದಲಾಯಿಸಿ, ಅಡಗಿಕೊಂಡಿದ್ದು ಜೀವ ಉಳಿಸಿಕೊಳ್ಳಬೇಕೆಂದೂ, ಆ ಕೆನ್ನಾಯಿಗಳು ಹೋದ ಬಳಿಕ ಹಿಂತಿರುಗ ಬಹುದೆಂದೂ ಸಲಹೆ ನೀಡಿತು.

ಸಭೆಯಲ್ಲಿ ಚರ್ಚೆ ಆಯಿತು. ಹೆದರಿ, ಅಡಗಿಕೊಂಡಿರುವುದಕ್ಕಿಂತ, ಧೈರ್ಯದಿಂದ ಕಾದಾಡುವುದು ಶ್ರೇಯಸ್ಕರವೆಂದು ತೀರ್ಮಾನವಾಯಿತು. ತಮಗಾಗಿ ಮೌಗ್ಲಿಯು ಸಾಯಬಾರದು ಎಂದು ತೋಳಗಳು ಹೇಳಿದುವು. ಅದು ಹೇಗೆ ಸಾಧ್ಯ? ನಾನು ಹಿಂಡಿನಲ್ಲೊಬ್ಬ ಎಂದು ಹಠ ಮಾಡಿದನು.



ಈ ಸಮಾಚಾರವನ್ನು 'ಕಾ'ಗೆ ವಿವರಿಸಿದನು. ಅದು, "ಆತುರಪಟ್ಟು, ಮಾತು ಕೊಟ್ಟಿದ್ದೀಯೆ ಮಗು" ಎಂದಿತು. ಮರುಕಪಟ್ಟು, ಮುಂದುವರೆಸಿತು. ಕೆಂಪುನಾಯಿಗಳಿಗೆ ಹುಲಿ, ಆನೆಗಳೂ ಸಹ ಹೆದರುತ್ತವೆ. ಈಗ ಮಾತು ಕೊಟ್ಟಿರುವೆಯಾದ ಕಾರಣ, ಕದನಕ್ಕೆ ಸಿದ್ಧನಾಗು. ನಿನಗೂ, ತೋಳಗಳಿಗೂ ಆಸರೆಯಾಗಿ ನಾನಿರುತ್ತೇನೆ ಎಂದಿತು. ಅನಂತರದಲ್ಲಿ ಕಾದಾಟಕ್ಕೆ ಸೂಕ್ತವಾದ ಪ್ರದೇಶದ ಬಗ್ಗೆ ಪರಿಚಯ ಮಾಡಿತು. ವೇಣುಗಂಗಾ ತೀರವು ಪ್ರಶಸ್ತವಾದುದು. ಶತ್ರುಗಳನ್ನು ಸೋಲಿಸಬೇಕಾದರೆ ನದಿಯ ಮೇಲು ಹರವಿನಲ್ಲಿ ಒಂದು ಪ್ರಪಾತವಿದೆ. ಪ್ರಪಾತದ ಇಕ್ಕೆಲಗಳಲ್ಲಿ ಎತ್ತರವಾದ ಬಂಡೆಗಳು ಇಕ್ಕಟ್ಟಾಗಿ ಹಬ್ಬಿವೆ. ಆ ಬಂಡೆಗಳಲ್ಲಿ ಲೆಕ್ಕವಿಲ್ಲದಷ್ಟು ಹೆಜ್ಜೇನು ಗೂಡು ಕಟ್ಟಿವೆ. ಆ ಸ್ಥಳದಲ್ಲಿ ನದಿಯು ರಭಸದಿಂದ ಕೆಳಕ್ಕೆ ಧುಮುಕುತ್ತದೆ ಎಂದು ಹೇಳಿ ಮೌಗ್ಲಿಯನ್ನು ಕರೆದೊಯ್ದು ತೋರಿಸಿತು. ಮೌಗ್ಲಿಯೂ ಎಲ್ಲವನ್ನೂ ಆಮೂಲಾಗ್ರವಾಗಿ, ಪರಿಶೀಲಿಸಿದನು.



ಆ ಬಳಿಕ ಹೆಜ್ಜೇನು ಬಂಡೆಗಳ ಮೇಲೇರಿದನು. ಅಲ್ಲಿ ಮೂರು ರಾಶಿ ಕಲ್ಲುಗುಂಡುಗಳನ್ನು ಜಮಾ ಮಾಡಿದನು. ಆ ಎತ್ತರದಿಂದ ನದಿಯೊಳಕ್ಕೆ ಧುಮುಕಿ, "ಕಾ"ನ ಸಹಾಯದಿಂದ ಸುಖವಾಗಿ ದಡ ಸೇರಿದನು. ಕೆಳಗಡೆ ನೀರಿನ ಆಳ ಕಡಿಮೆ ಇರುವ ಸ್ಥಳದ, ನದೀ ತೀರದಲ್ಲಿ ಕಾದಾಡಲು ತೋಳಗಳು ಗುಂಪು ಸೇರಿದ್ದುವು. ಆ ಸಂಜೆ, ಕೆಂಪುಸೀಳುನಾಯಿಗಳಿಗೆ ಮಂಕು ಬಡಿಸಲೂ, ತೋಳಗಳಿಗೆ ಕಾದಾಡಲೂ

ಉತ್ತಮ ಸಮಯವೆಂದು ನಿರ್ಧರಿಸಿದನು. ಅದೇ ಕಾಲಕ್ಕೆ ಕಲ್ಲು ಹೊಡೆದು, ಹೆಜ್ಜೇನನ್ನು ರೇಗಿಸುವುದಾಗಿಯೂ, ತಾನು ಮಧ್ಯಾಹ್ನವೇ ಹೋಗಿ ಕೆನ್ನಾಯಿ ಗುಂಪು ಬರುವುದನ್ನು ಎದುರುಕಾಯುವುದಾಗಿಯೂ ಹೇಳಿ ಮರವೇರಿ ಕುಳಿತನು.

ಮಟಮಟಮಧ್ಯಾಹ್ನದ ಸಮಯ. ಆ ಸುಡುಬಿಸಿಲಿನಲ್ಲಿ ಕೆನ್ನಾಯಿಗಳ ಗುಂಪು, ಬೊಗಳುತ್ತಾ ಭೋರ್ಗರೆಯುತ್ತಾ, ಭಯಂಕರವಾಗಿ ಏದುತ್ತಾ, ನಾಲಿಗೆ ಚಾಚಿ ಜೊಲ್ಲು ಸುರಿಸುತ್ತಾ, ತೋಳಗಳ ಅಡವಿಗೆ ನುಗ್ಗಿ ಬರುತ್ತಿದ್ದುವು. ಅವುಗಳು ಇನ್ನೂ ಸ್ವಲ್ಪ ದೂರ ಇರುವಾಗಲೇ, ಅವು ಅಡವಿಗೆ ನುಗ್ಗದಂತೆ ಮಾಡಲು, ಎತ್ತರಿಸಿದ ದನಿಯಲ್ಲಿ ಬೈಗುಳ ಹಾಕುತ್ತಾ ಅವುಗಳ ಗಮನ ಸೆಳೆದನು. ಆ ಕೆನ್ನಾಯಿಗಳು ದಾರಿ ಬದಲಿಸಿ, ಮೌಗ್ಲಿಯು ಏರಿದ್ದ ಮರದ ಸುತ್ತಲೂ ನೆರೆದುವು. ಮೌಗ್ಲಿಯು ಅವುಗಳನ್ನು, ಡೆಕ್ಕನ್ ಪ್ರದೇಶದ ಕುರುಡು ಇಲಿಗಳಾದ "ಬಿಕ್ಕೈ"ಗೆ ಹೋಲಿಸಿ ಹಾಸ್ಯ ಮಾಡಿದನು. ಹಾಡು ಕಟ್ಟಿ, ಕಾಲು ಕೆರೆದು ಕೆರಳಿಸಿದನು. ಆ ಸೀಳುನಾಯಿಗಳ ಮುಂದಾಳು, ಅತಿ ಪ್ರಯತ್ನದಿಂದ ಮೌಗ್ಲಿಯನ್ನು ಹಿಡಿಯಲು ಮೇಲೆ ಹಾರಿತು. ಮೌಗ್ಲಿಯು ಉಪಾಯವಾಗಿ ತಪ್ಪಿಸಿಕೊಂಡು, ಆ ಮುಂದಾಳು ನಾಯಿಯ ಬಾಲವನ್ನು ಹಿಡಿದು, ತನ್ನ ಬಳಿ ಇದ್ದ ಚಾಕುವಿನಿಂದ ಕತ್ತರಿಸಿ ಹಾಕಿದನು. ನಾಯಿಗಳ ಮೊದಲಾಳು ಕೆಳಗೆ ಬಿದ್ದು ನೋವಿನಿಂದ ಅರಚಿತು. ಕೆಂಪುನಾಯಿಗಳು ರೊಚ್ಚಿಗೆದ್ದುವು.

ಹೀಗೆ ಆ ಕೆನ್ನಾಯಿಗಳ (ಧೋಲುಗಳ) ಗುಂಪನ್ನು ಸಂಜೆ ಆಗುವವರೆಗೆ ತಡೆದು, ಸಮಯ ಬಂದ ಕೂಡಲೇ, ಮೈಗೆ ಕಾಡರಿಶಿನವನ್ನು ಬಳಿದುಕೊಂಡಿದ್ದ ಮೌಗ್ಲಿಯು, ಮರದಿಂದ ಮರಕ್ಕೆ ಮಂಗಗಳಂತೆ ಹಾರುತ್ತಾ ನದಿಗೂ ಅಡವಿಗೂ ಮಧ್ಯದ ನದೀತೀರದ ಬಯಲಿಗೆ ಬಂದವನೇ ತನ್ನ ಬಳಿ ಇಟ್ಟು ಕೊಂಡಿದ್ದ, ಡೋಲುಗಳ ನಾಯಕನ ಕತ್ತಿರಿಸಿದ ಬಾಲವನ್ನು ಹಿಂದಕ್ಕೆ ಎಸೆದನು. ನಾಯಿಗಳು ದಿಕ್ಕು ತಿರುಗಿ ಆ ಕಡೆ ಓಡಿದುವು. ನಾಯಿಗಳು ಆ ಕಡೆಗೆ ಓಡಿದ್ದೇ ತಡ, ಕ್ಷಣಾರ್ಧದಲ್ಲಿ ಮರದಿಂದ ಕೆಳಕ್ಕೆ ಜಿಗಿದು, ಪ್ರಪಾತದ ಕಡೆಗೆ ಓಡಿದನು.

ಕೆನ್ನಾಯಿಗಳೂ ಬೆನ್ನಟ್ಟಿದುವು. ರೂಢಿಯಿಲ್ಲದ ಆ ಬಯಲಿನ, ಕಲ್ಲು ಬಿರುಕುಗಳಲ್ಲಿ ಕಾಲು ಸಿಕ್ಕಿ, ಕಾಲು ಮುರಿದುಕೊಂಡುವೆಷ್ಟೋ? ಮೇಲೇಳಲಾಗದೆ, ಮಣ್ಣು ಮುಕ್ಕಿದುವೆಷ್ಟೋ? ವೇಗದಿಂದ ಓಡಿಬಂದ ಅವನು ಕಲ್ಲು ಮತ್ತು ಗುಂಡುಗಳನ್ನು ಜಮಾ ಮಾಡಿದ್ದ ಸ್ಥಳ ಸೇರುವುದಕ್ಕೂ, ಬೆನ್ನಟ್ಟಿ ಬಂದ ಧೋಲುಗಳು ಅವನ ಮೇಲೆ ಹಾರುವುದಕ್ಕೆ ಹವಣಿಸುವುದಕ್ಕೂ ಸರಿಹೋಯಿತು. ಮೌಗ್ಲಿಯು ಚಾಣಾಕ್ಷತನದಿಂದ ತಾನು ಜಮಾ ಮಾಡಿದ್ದ ಕಲ್ಲುರಾಶಿಯನ್ನು ಕಾಲಿನಿಂದ ಒದ್ದನು. ಕ್ಷಣದಲ್ಲಿ ಪ್ರಪಾತಕ್ಕೆ ಹಾರಿದನು. ಅಲ್ಲಿ ಅವನಿಗಾಗಿ ಕಾದಿದ್ದ 'ಕಾ' ಮೌಗ್ಲಿಯನ್ನು ಹೂವಿನಂತೆ ಹಿಡಿದು, ನದೀ ಪ್ರವಾಹದಲ್ಲಿ ಇಬ್ಬರೂ ತೇಲಿ ಮುನ್ನಡೆದರು.

ಕಲ್ಲೇಟು ಬಿದ್ದು ಮೇಲೆದ್ದ ಹೆಜ್ಜೇನು, ಕೋಟಿಸಂಖ್ಯೆಯಲ್ಲಿ ಕೆನ್ನಾಯಿಗಳನ್ನು

ಮುತ್ತಿದುವು. ಮೌಗ್ಲಿಯ ಮೇಲಿನ ರೋಷದಿಂದ, ಆ ಕಡೆ ನುಗ್ಗಿದ, ನೂರಾರು ನಾಯಿಗಳು, ಪ್ರಪಾತದಲ್ಲಿ ಬಿದ್ದು ಸತ್ತುವು. ಜೇನುಕಡಿತದಿಂದ ಸುಮಾರು ನಾಯಿಗಳು ಕಡೆಯುಸಿರೆಳೆದುವು. ಹಾಗೂ ಬದುಕಿ ಪ್ರವಾಹದಿಂದ ತೇಲಿಬಂದ ನಾಯಿಗಳನ್ನು ಮೌಗ್ಲಿಯು ತನ್ನ ಚಾಕುವಿನಿಂದ ಇರಿದು ಸಾಯಿಸಿದನು. ಹಾಗೂ ಉಳಿದಿದ್ದ ಕೆನ್ನಾಯಿಗಳು, ತಾವು ಮೋಸ ಹೋಗಿರುವುದನ್ನು ಮನಗಂಡುವು. ಜಾಗೃತವಾದುವು. ನದೀತೀರದ ಮರಳು ದಿಣ್ಣೆಯ ಮೇಲಿದ್ದ ತೋಳಗಳ ಕಡೆಗೆ ನುಗ್ಗಿದುವು.

'ಕಾ', ಮೌಗ್ಲಿಯನ್ನು ಅಲ್ಲಿಗೆ ಕರೆತಂದು. "ತೋಳಗಳು ಶತ್ರುಗಳ ಕುತ್ತಿಗೆಗೆ ಬಾಯಿಹಾಕುತ್ತವೆ. ಕೆನ್ನಾಯಿಗಳು ಕಿಬ್ಬೊಟ್ಟೆಗೆ ಬಾಯಿಹಾಕಿ ಸೀಳುತ್ತವೆ, ಜೋಕೆ!" ಎಂದು ಎಚ್ಚರಿಕೆ ಹೇಳಿ ಅಲ್ಲಿಂದ ಹೊರಟುಹೋಯಿತು.

ಆಗ ಆ ಮರಳುದಿಣ್ಣೆಯ ಮೇಲೆ ಘೋರ ಕಾಳಗವೇ ನಡೆಯಿತು. ಹಿಂಡಿನ ಗೌರವ ಕಾಪಾಡಲು ಗಂಡುತೋಳಗಳೂ; ಮರಿಗಳ ಮಮತೆಯ ಕಾರಣ, ಅವುಗಳ ರಕ್ಷಣೆಗಾಗಿ ಲಾಹಿಣೀ(ಹೆಣ್ಣು ತೋಳ)ಗಳೂ; ಸಹಜ ವೀರ್ಯದಿಂದ ಯುವ ಮರಿಗಳೂ ಹೋರಾಡಿದುವು. ಆ ಮಸಕು ಕತ್ತಲಿನ ಭಯಂಕರ ಕಾಳಗವು ಕೆನ್ನಾಯಿ ಗಳಿಗೆ ಸವಾಲಾಯಿತು. ತೋಳಗಳಿಗೆ ಅನುಕೂಲವಾಗಿದ್ದಿತು. ಆದರೂ ಆ ಮರಳು ದಿಣ್ಣೆಯ ಮೇಲೆ ರಕ್ತದ ಓಕುಳಿ ಆಡಿತು. ಅಕೇಲ ಮತ್ತು ಫೆಯೋವ ಇವರ ಬೆಂಗಾವಲಿನಲ್ಲಿ, ತನ್ನ ಚಾಕುವಿನ ಚಳಕದಿಂದ ಮೌಗ್ಲಿಯು ವೀರಾವೇಶದಿಂದ ಹೋರಾಡಿದನು. ಎರಡೂ ಕಡೆ ಸಾಕಷ್ಟು ಸಾವುನೋವುಗಳಾದರೂ, ತೋಳಗಳದು ಮೇಲುಗೈ ಆಗಿತ್ತು.

ಬೆಳಗಿನ ಝಾಮದ ವೇಳೆಗೆ, ಅಳಿದುಳಿದ, ಬೆರಳೆಣಿಕೆಯಷ್ಟು ಕೆನ್ನಾಯಿಗಳು ಹಿಮ್ಮೆಟ್ಟಿದುವು. ತೋಳಗಳೂ, ಮೌಗ್ಲಿಯೂ ಆ ಕಡೆ ನುಗ್ಗಿದರು. ಧೋಲುಗಳ ನಾಯಕನನ್ನು ಕೊಂದುಹಾಕಿದರು. ಅಲ್ಲಿ ವೀರಮರಣಕ್ಕಾಗಿ ಕ್ಷಣಗಣನೆ ಮಾಡುತ್ತಿದ್ದ "ಒಂಟೆಲ್ಲಾ" ಮತ್ತು ಪ್ರಾಣಾಪಾಯವಾಗುವಂತೆ ಗಾಯಗೊಂಡಿದ್ದ "ಅಕೇಲ"ನೂ ಕಾಣಿಸಿದರು. ಕೂಡಲೇ ಮೌಗ್ಲಿಯು ಓಡಿಬಂದು, ಅಕೇಲಾ ಅಪೇಕ್ಷಿಸಿದಂತೆ ಅದರ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡು, ರಕ್ತಸಿಕ್ತವಾಗಿದ್ದ ಅದನ್ನು ಎದೆ ಗವಚಿಕೊಂಡು ನೇವರಿಸುತ್ತಿದ್ದನು.

ಅಕೇಲನಾದರೋ ಇದೇ ತನ್ನ ಕೊನೆಯ ಕ್ಷಣವೆಂದು ತಿಳಿದು, ಮೌಗ್ಲಿಯ ಹಿಡಿತದಿಂದ ತಲೆ ಕೊಡವಿಕೊಂಡಿತು. ಮೌಗ್ಲಿಯು ಹಿಂಡಿಗೆ ಸೇರಿದ ದಿನದಿಂದ ಹಿಡಿದು, ಆ ಕ್ಷಣದವರೆಗಿನ ಅನೇಕ ಘಟನೆಗಳನ್ನು ಸ್ಮರಿಸಿತು. ಇನ್ನು ಮುಂದೆ ಮೌಗ್ಲಿಯು, ಕಾಡಿನಲ್ಲಿ ಒಂಟಿಯಾಗಿರದೆ, ಮತ್ತೆ ಮನುಷ್ಯರನ್ನು ಸೇರುವುದು ಸೂಕ್ತವೆಂದು ಸಲಹೆ ನೀಡಿತು. ಪ್ರತಿ ಅಕೇಲನೂ (ತೋಳವೂ) ಅಂತಿಮಕ್ಷಣದಲ್ಲಿ ಮಾಡುವಂತೆ, ಮೃತ್ಯುಗೀತೆಯನ್ನು ಹಾಡುತ್ತಾ, ಮೇಲೆ ಹಾರಿಬಿದ್ದು ಅಸು ನೀಗಿತು.



ಮೌಗ್ಲಿಯು ಕಳೆದುಕೊಂಡ ಆ ಅಮೂಲ್ಯ ಜೀವಿಗಾಗಿ ಬಹಳ ಕಾಲ ಮರುಗಿದನು. ಫೆಯೋವಾ ಮತ್ತು ಉಳಿದ ತೋಳಗಳು ಅಕೇಲನ ಅಂತ್ಯಕ್ರಿಯೆ ಯನ್ನು ಬಹಳ ಗೌರವದಿಂದ ನೆರವೇರಿಸಿದರು.

ಅಂದಿನ ಕಾಳಗದಲ್ಲಿ ಹೋರಾಡಿದ ನಲವತ್ತೈವತ್ತು ತೋಳಗಳಲ್ಲಿ ಹತ್ತು ಹದಿನೈದು ಮಾತ್ರ ವೀರಸ್ವರ್ಗ ಸೇರಿದುವು. ಆದರೆ ಪ್ರಮತ್ತವಾಗಿ ಬಂದ ಕೆನ್ನಾಯಿಗಳ ಗುಂಪಿನಲ್ಲಿ ಒಂದಾದರೂ ಡೆಕ್ಕನ್ ಪ್ರಾಂತಕ್ಕೆ ಹಿಂದಿರುಗಲಿಲ್ಲ.

## ಚೀಲ್‌ನ ಹಾಡು

**ರಾತ್ರಿ ಕದನಕೆ ನಡೆದ ಇವರೆನ್ನ ಸ್ನೇಹಿತರು।**
**ಚೀಲ್‌ನನ್ನು ನೋಡಿ, ಚೀಲ್‌ನನ್ನು ನೋಡಿ॥**
**ಕದನದ ಅಂತ್ಯವನು ಕೂಗಲು ಬಂದಿಹೆನು।**
**ಚೀಲ್ ಹದ್ದು ನಾನು, ಇವರೆನ್ನ ಮುಂದಾಳ್ಗಳು॥**

**ಹೊಸಬೇಟೆ ಹೊಡೆದಿರುವುದೆಂದೆತ್ತಿ ಹೇಳಿದರು।**
**ಹಸಿರುಕಾವಲಿನ ಜಿಂಕೆಯನು ತೋರಿದೆನಾಗ॥**
**ಎಲ್ಲ ದಾರಿಗಳೂ ಇಲ್ಲಂತ್ಯವಾಗಲು।**
**ಎಲ್ಲರ ಬಾಯಿಯೂ ಮುಚ್ಚಿತೇಳಿ ಈಗ॥**

ಬೇಟೆ ಕೂಗನು ಕೂಗಿದವರು, ಬೆನ್ನಟ್ಟಿದವರು।
ಚೀಲ್‌ನನ್ನು ನೋಡಿ, ಚೀಲ್‌ನನ್ನು ನೋಡಿ॥
ಕಡವೆಯನು ಕೊಂದವರು, ಚುಚ್ಚಿ ನಕ್ಕವರು।
ಚೀಲ್ ಹದ್ದು ನಾನು, ಇವರೆನ್ನ ಮುಂದಾಳುಗಳು॥



ವಾಸನೆಯ ಹಿಂದಿದ್ದವರು, ಮುಂದಿದ್ದವರು, ಮೂಸಿನಿಂತವರು।
ಕೊಂಬು ಬಿಟ್ಟವರು, ಮೇಲಾಳ್ಗಳು।
ಎಲ್ಲರಾದಾರಿ ಇಲ್ಲಿಗೇ ಮುಗಿಯಿತು, ಅಚಲರಿನ್ನು ಅವರೆಲ್ಲರೂ॥

ಗೆಳೆಯರಾಗಿದ್ದವರೆನಗೆ, ಈಗ ಸತ್ತಿಹರು ಕಾಣಿ।
ಚೀಲ್‌ನನ್ನು ನೋಡಿ, ಚೀಲ್‌ನನ್ನು ನೋಡಿ॥
ವೀರರನ್ನು ಸಂತೈಸಲು, ನಾನೀಗ ಬಂದಿಹೆನು।
ಚೀಲ್ ಹದ್ದು ನಾನು, ಇವರೆನ್ನ ಮುಂದಾಳ್ಗಳು॥

ಹರಿದ ಬೆನ್ನು, ಇಳಿದ ಕಣ್ಣು, ತೆರೆದ ಬಾಯಿ।
ಎಲ್ಲವೂ ಕೆಂಬಣ್ಣ, ಗುಂಪಾಗಿ ಸತ್ತುಬಿದ್ದಿಹರಿಲ್ಲಿ॥
ಎಲ್ಲ ದಾರಿಗಳೂ ಅಂತ್ಯವಾಗಿವೆ ಇಲ್ಲಿ। ಬಾಯಿಗಳು ಮುಚ್ಚಿಹುವು ಕೇಳಿ।
ಎಲ್ಲರ ದಾರಿಗಳೂ ಮುಗಿದಿರಲು, ನನ್ನವರೆಲ್ಲರಿಗೂ ಊಟವಿಲ್ಲಿ॥

## ಪ್ರಸಂಗ 8

# ವಸಂತದ ಓಟ

ಚಳಿಗಾಲ ಮುಗಿಯಿತು ಎಂದರಾಯಿತು. ಪ್ರತಿ ವರ್ಷವೂ ಕಾಡಿನಲ್ಲಿ ದೊಡ್ಡ ಬದಲಾವಣೆ ಆಗುತ್ತದೆ. ಗಿಡಮರಗಳು ಚಿಗುರಿ, ಹೂಬಿಟ್ಟು ಕಂಗೊಳಿಸುತ್ತವೆ. ಹಕ್ಕಿ ಪಕ್ಷಿಗಳಿಗೆ ಹೊಸ ಗರಿ, ಹೊಸ ದನಿ ಬರುತ್ತದೆ. ಅವುಗಳ ಇಂಪಾದ ದನಿಗೆ ಕಿವಿಗೊಡದವರಾರು? ನಾಲ್ಕು ಕಾಲು ಪ್ರಾಣಿಗಳಿಗೆ ಹೊಸ ಕೊಂಬೂ, ಹೊಸ ಚರ್ಮವೂ ಬರುತ್ತದೆ. ಸುಗಂಧಭರಿತ ಮಲಯಮಾರುತವು ಬೀಸುತ್ತಿದ್ದರೆ, ಕ್ರಿಮಿಕೀಟಗಳೂ ಸಹ, ಮೈಮರೆತು ಹಾಡುತ್ತ ನಲಿಯುತ್ತವೆ. ಪ್ರತಿ ಜೀವಿಯೂ ಯಾರ ಹಂಗೂ ಇಲ್ಲದೆ, ಸ್ವಚ್ಛಂದವಾಗಿ ವಿಹರಿಸಿ, ಆನಂದಪರವಶವಾಗುತ್ತದೆ.

ಕೆಂಪು ನಾಯಿಗಳ ಕದನದ ಬಳಿಕ ಎರಡು ವರ್ಷ ಕಳೆದಿದೆ. ಮೌಗ್ಲಿಗೆ ಆಗ 17ರ ಹರೆಯ. ಅವನೀಗ ಬಲಾಢ್ಯನಾಗಿದ್ದಾನೆ. ಸುಂದರ ತರುಣನಾಗಿದ್ದಾನೆ. ಸುಗುಣಿ ಆಗಿದ್ದಾನೆ. ತನ್ನ ಬುದ್ಧಿಬಲ, ದೇಹಬಲಗಳಿಂದ ಅರಣ್ಯದ ಅರಸನೋ ಎಂಬಂತಿದ್ದಾನೆ. ಆ ವರ್ಷದ ವಸಂತಕಾಲ ಬಂದಿತು. ಎಲ್ಲ ಜೀವಿಗಳೂ ಸಂತೋಷ ದಿಂದ, ಮನಸೋ ಇಚ್ಛೆ ಹಾಡುತ್ತಾ ಓಡುತ್ತಾ ಇದ್ದಾರೆ. ಮೌಗ್ಲಿಯ ಮನಸ್ಸಿನಲ್ಲಿಯೂ ಒಂದು ರೀತಿಯ ಬದಲಾವಣೆ ಆಗಿದೆ. ಆ ಸುಖಮಯ ಯಾತನೆಯನ್ನು ಅರ್ಥಮಾಡಿಕೊಳ್ಳಲಾಗದೆ ತಳಮಳಿಸುತ್ತಿದ್ದಾನೆ.

ತನ್ನ ಭಾವನೆಗಳನ್ನು ಹೊರಗೆಡವಲಾರ. ಹಂಚಿಕೊಳ್ಳಲು ಜೊತೆ ಇಲ್ಲ. ಒತ್ತಡವನ್ನು ತಡೆಯಲಾಗುತ್ತಿಲ್ಲ. ಒಳಗೇ ಕೊರಗು. ತನ್ನ ಬಗ್ಗೆ ತನಗೇ ಮರುಕ. ಸಮಾಧಾನ ಪಡಿಸಲು ಯಾರೂ ಇಲ್ಲ. ಕೂಗಿ ಕರೆದರೂ ಯಾರೂ ಬರಲೊಲ್ಲರು. ಅಲ್ಲದೆ ಅವನ ಕಾಡಿನ ಸ್ನೇಹಿತರಾರೂ, ಅವನ ಸಮರಲ್ಲ. ಅವನು ಒಂಟಿ ಮನುಷ್ಯ. ಅದೊಂದು ದಿನ, ವಸಂತನ ಪ್ರಭಾವದಿಂದ ಪ್ರಮತ್ತವಾಗಿದ್ದ ಎರಡು ತೋಳಗಳ ಜಗಳವನ್ನು ಬಿಡಿಸಲು ಅವನಲ್ಲಿ ತ್ರಾಣವಿರಲಿಲ್ಲ.

ಕಾಯಿಲೆ ತರುವಂತಹ ಏನನ್ನೂ ತಿಂದಿಲ್ಲ. ಏನನ್ನೂ ಕುಡಿದಿಲ್ಲ. ಹಾಗಾದರೂ ಹೀಗೇಕೆ? ಏನನ್ನೂ ಸೇವಿಸದಿದ್ದರೂ ತನಗೇಕೆ ಹೀಗೆ ಎಂದು ಆಶ್ಚರ್ಯ ಪಟ್ಟು ಕೊಂಡನು. ಅಸಮಾಧಾನ ಪಟ್ಟನು. ತನ್ನನ್ನು ಅರ್ಥಮಾಡಿಕೊಳ್ಳುವವರಾರೂ ಇಲ್ಲದ್ದಕ್ಕಾಗಿ ವ್ಯಥೆಪಟ್ಟನು. ಆ ರಾತ್ರಿ ತಿಂಗಳ ಬೆಳಕಿನಲ್ಲಿ , ತಾನೊಬ್ಬನೇ ವಸಂತದ ಓಟದಲ್ಲಿ ಭಾಗಿಯಾಗಲು ನಿರ್ಧರಿಸಿದನು. ಏಕಾಂಗಿಯಾಗಿ ನೆಗೆಯುತ್ತಾ, ಓಡುತ್ತಾ, ಹಾಡುತ್ತಾ, ಕುಣಿಯುತ್ತಾ ಸಂತೋಷಪರವಶನಾಗಿ ಬಹುದೂರ ಸುತ್ತಿದನು.

ದೇಹವು ಸುತ್ತಿ ದಣಿದಿದ್ದರೂ, ಮನಸ್ಸಿನ ದುಗುಡ ಕಡಿಮೆ ಆಗಲಿಲ್ಲ. ಆ ವೇಳೆಗೆ ತನ್ನ ಕಾಡು ಪ್ರದೇಶವನ್ನು ಬಿಟ್ಟು, ಪಕ್ಕದ ಕಾಡಿನಂಚಿಗೆ ಬಂದಿದ್ದನು. ಅಲ್ಲೊಂದು ಮರದ ತುಂಡಿನ ಮೇಲೆ ಮಲಗಿ ನಿದ್ರಿಸಿದನು. ಅಲ್ಲಿಗೆ ಮಹಿಷಿಯನ್ನು (ಎಮ್ಮೆ) ಜೊತೆ ಹಾಕಿಕೊಂಡು ಬಂದಿದ್ದ ಮಹಿಷನನ್ನು (ಕೋಣ) ಏನೇನೋ ಪ್ರಶ್ನಿಸಿ, ಉತ್ತರಕ್ಕಾಗಿ ಬಲವಂತ ಮಾಡಿದನು. ಆ ಮಹಿಷನು ಅಲ್ಲಿಂದ ಸಮೀಪದಲ್ಲೇ ಇರುವ ಮನುಷ್ಯರ ನೆಲೆಯ ಬಗ್ಗೆ ತಿಳಿಸಿತು.

ತಾನು ಹಿಂದೆ ಜೊತೆ ಇದ್ದ ಮನುಷ್ಯರಲ್ಲೇನಾದರೂ ಬದಲಾವಣೆ ಆಗಿದೆಯೋ ಎಂಬ ಕುತೂಹಲದಿಂದ, ಕಾಡು ದಾಟಿ ಊರಿನ ಬಳಿಗೆ ಬಂದನು. ಇವನ ಸುಳಿವು ತಿಳಿದ ನಾಯಿಗಳು ಬೊಗುಳಿದುವು. ಆಗ, ಅಂಚಿನಲ್ಲಿದ್ದ ಮನೆಯೊಂದರಿಂದ ಹೆಂಗಸೊಬ್ಬಳು ಹೊರಬಂದಳು. ಅವಳು ತನ್ನಮ್ಮ. ಹೆತ್ತ ತಾಯಿ ಮೆಸ್ಸವ್ವ. ಕಣ್ಣಗಲಿಸಿ ನೋಡಿದನು. ಅನುಮಾನವೇ ಇಲ್ಲ. ಧೈರ್ಯ ಮಾಡಿದನು. ಮೆಲ್ಲಗೆ "ಅಮ್ಮಾ" ಎಂದನು.



"ಅಮ್ಮಾ" ದನಿ ಕೇಳಿದ್ದೇ ತಡ, ಆ ಹೆಂಗಸು ಪುಳಕಿತಳಾದಳು. ಹುಲಿಯು ಕದ್ದಿದ್ದ ತನ್ನ ಮಗ; ತನ್ನನ್ನೂ ತನ್ನ ಗಂಡನನ್ನೂ ಸಾವಿನಿಂದ ಕಾಪಾಡಿದ ತನ್ನ ಮಗ; ದಿವ್ಯಸುಂದರನಾಗಿ ಬೆಳೆದಿರುವ ತನ್ನ ಮಗ—ನಾಥೂ!!! ಗುರುತು ಹಿಡಿದಳು.

ಬಳಿಗೆ ಕರೆದು, ನೇವರಿಸಿದಳು, ಮುದ್ದಾಡಿದಳು. ತನ್ನ ಕತೆಯನ್ನು ಹೇಳಿಕೊಳ್ಳುತ್ತಾ, ಅವನಿಗೆ ಬಿಸಿ ಬಿಸಿ ಹಾಲು ಕುಡಿಸಿದಳು. ತಾವಿಬ್ಬರೂ ಕಾನೇವಾಡಕ್ಕೆ ಬಂದ ಮೇಲೆ, ಹಿಂದಿನ ಗ್ರಾಮದಲ್ಲಿ ತಮಗೆ ತೊಂದರೆ ಕೊಟ್ಟವರನ್ನು ಶಿಕ್ಷಿಸಲು ಸರ್ಕಾರದ ನೆರವು ಕೋರಿರುವುದಾಗಿ ಹೇಳಿದಳು. ಆದರೀಗ ಆ ಊರು ಹಾಳುಬಿದ್ದು, ಕಾಡಿನ ಭಾಗ ವಾಗಿರುವುದಾಗಿ ತಿಳಿಸಿದಳು. ಈ ಊರಿನಲ್ಲಿ ಗಂಡನು ಕೃಷಿಕನಾಗಿದ್ದುದಾಗಿಯೂ, ತಾವಿಬ್ಬರೂ ಸುಖವಾಗಿ ಇದ್ದುದಾಗಿಯೂ ಹೇಳಿದಳು.

ದುರದೃಷ್ಟವಶಾತ್ ತನ್ನ ಗಂಡನು ಈಗ ಎರಡು ವರ್ಷಗಳ ಹಿಂದೆ ಕಾಲವಾದನೆಂದೂ, ಆ ಕಾಲಕ್ಕೆ ತಮಗೊಂದು ಕೂಸು ಹುಟ್ಟಿದುದಾಗಿಯೂ ತಿಳಿಸಿದಳು. ಮೌಗ್ಲಿಯು ತನ್ನ ತಮ್ಮನನ್ನು ಆಶೀರ್ವದಿಸಬೇಕೆಂದು ಹೇಳಿ, ಆ ಮಗುವನ್ನು ಅವನ ಕೈನಲ್ಲಿಟ್ಟಳು.

ತಾಯಿಯ ಆರೈಕೆ, ಬಿಸಿ ಬಿಸಿ ಹಾಲು, ನೇವರಿಕೆ, ಸವಿನುಡಿಗಳು, ಜೊತೆಗೆ ಮುದ್ದುತಮ್ಮನ ಚೆಲ್ಲಾಟಗಳಿಂದ, ಅವನ ಮನಸ್ಸು ಸ್ಥಿಮಿತಕ್ಕೆ ಬಂತು. ಸ್ವಸ್ಥಚಿತ್ತನಾಗಿ, ಕಾಡಿನ ರೂಢಿಯಂತೆ, ಆ ದಿನ ಮತ್ತು ಮರುದಿನ, ಹಗಲೂ ರಾತ್ರಿ, ಹಾಯಾಗಿ ನಿದ್ರಿಸಿದನು. ಏಳುವ ಹೊತ್ತಿಗೆ, ಬಿಸಿಬಿಸಿ ರೊಟ್ಟಿ, ಹಾಲು ಕೈಗೆ ಬಂತು. ಬೂದಣ್ಣನು ಬಂದು ಕರೆದನು. ಸರಿ, ಮೌಗ್ಲಿಯು ಕಾಡಿಗೆ ಹೊರಟು ನಿಂತನು. ಮೆಸ್ಸವ್ವಳು ಗದ್ಗದಿತಳಾದಳು. "ಮಗೂ, ನಾಥೂ, ನಿನ್ನಮ್ಮನ ಬಳಿಗೇ ಬಂದು ಬಿಡು" ಎಂದು ಅಂಗಲಾಚಿದಳು.

ಮೌಗ್ಲಿಗೂ ಅದು ನ್ಯಾಯವೆನಿಸಿತು. ಬೂದಣ್ಣನೂ ಅದೇ ಸರಿ ಎಂದನು. ತಾವು ನಾಲ್ವರು ಅಣ್ಣತಮ್ಮಂದಿರೂ, ಎಂದೆಂದಿಗೂ ಮೌಗ್ಲಿಗೆ ವಿಧೇಯರು ಎಂದು ತಿಳಿಸಿದನು. ಮೌಗ್ಲಿಯು ತನ್ನ ಹಿಂಡೂ, ಗುಂಪಿನ ಎಲ್ಲಾ ಜೀವಿಗಳೂ ಕೂಡಲೇ ಸಭೆ ಸೇರಬೇಕೆಂದು ಹೇಳಿಕಳುಹಿಸಿದನು. ಆದರೆ ವಸಂತದ ಅಮಲಿನಲ್ಲಿದ್ದ ಅವರಾರೂ ಬರಲಿಲ್ಲ. ಬೂದಣ್ಣನೂ ಅವನ ಮೂವರು ತಮ್ಮಂದಿರೂ, ವಯೋವೃದ್ಧರಾದ ಬಾಲು ಬಘೀರರೂ ಹಾಗೂ "ಕಾ" ಬಂದಿದ್ದರು.

ಮೌಗ್ಲಿಯು ಊರಿನಲ್ಲಿರಲಿ, ಕಾಡಿನಲ್ಲಿರಲಿ, ತಾವೂ, ತಮ್ಮ ಒಡನಾಡಿಗಳೂ ಎಂದೆಂದಿಗೂ, ಮೌಗ್ಲಿಯ ಸಹಾಯಕರೆಂದೂ, ವಿಧೇಯರೆಂದೂ, ಒಕ್ಕೊರಲಿನಿಂದ ಹೇಳಿ ಪ್ರಮಾಣ ಮಾಡಿದರು. ಪ್ರೀತಿ, ವಾತ್ಸಲ್ಯ ತುಂಬಿ, ಅಭಿಮಾನದಿಂದ ಬಾಲು, ಬಘೀರ, ಕಾ ಅವನಿಗೆ ಹಿತವಾದ ನುಡಿದುವು. ಅವನನ್ನು ತಬ್ಬಿ ಗದ್ಗದಿತರಾದರು. ಈ ರೀತಿಯ ಅಭಿಮಾನಿಗಳನ್ನು ತೊರೆದು, ಮನುಷ್ಯ ಜಾತಿಯ ಜೊತೆ ಇರಲು ತೆರಳಬೇಕೆಂಬ ಯೋಚನೆಯೇ ಮೌಗ್ಲಿಗೆ ತಡೆಯಲಾಗದ ಚಿಂತೆಯಾಯಿತು.

ಜೇನುಹುಳುಗಳು, ಗೂಡಿನಲ್ಲಿ ಜೇನು ಮುಗಿದಿರುವಾಗ ಬಿಟ್ಟುಹೋಗಲು ಯೋಚನೆ ಮಾಡಬಾರದು ಎಂದು ಬಾಲು ಹೇಳಿತು. ಬಿಟ್ಟ ಪೊರೆಯನ್ನು ಮತ್ತೆ ಕಟ್ಟಿಕೊಳ್ಳುವ ಯೋಚನೆ ಮಾಡಬಾರದು ಎಂದು 'ಕಾ' ಹೇಳಿತು. "ಆ ದಿನ ಒಂದು

ಗೂಳಿಯನ್ನು ಕೊಂದು, ನಿನ್ನನ್ನು ಖರೀದಿಸಿ, ಹಿಂಡಿಗೆ ಸೇರಿಸಿದೆ. ಈ ದಿನ ಇನ್ನೊಂದು ಗೂಳಿಯನ್ನು ಕೊಂದು ನಿನ್ನನ್ನು ಹಿಂಡಿನಿಂದ ಬಿಡುಗಡೆ ಮಾಡಿದ್ದೇನೆ. ಎಂದಿದ್ದರೂ ಮನುಷ್ಯ ಮನುಷ್ಯನಾಗಿ ಬಾಳಬೇಕು. ಊರಿಗೆ ಹಿಂದಿರುಗಿ, ಸುಖವಾಗಿರು" ಎಂದು ಬಘೀರನು ಹರಸಿತು. ಮೌಗ್ಲಿಯ ಅಪ್ಪಣೆ ಕೋರಿ, ತಾವು ನಾಲ್ವರು ಸೋದರರು ಬೇರೆಯಾಗಿ ಬೇಟೆಯಾಡುವುದೆಂಬ ನಿರ್ಧಾರವನ್ನೂ, ತಾವು ನಾಲ್ವರು ಸೋದರರು, ಯಾವ ಸಮಯದಲ್ಲಿ ಕೋರಿದರೂ, ಮೌಗ್ಲಿಯ ಸೇವೆ ಮಾಡಲು 'ಸದಾ ಸಿದ್ಧ' ಎಂದೂ ಬೂದಣ್ಣನು ತಿಳಿಸಿದನು.

ಎಲ್ಲರೊಟ್ಟಾಗಿ, ಹಾಡಿಹರಸಿ, ಮೌಗ್ಲಿಯನ್ನು ಬೀಳ್ಕೊಟ್ಟುವು. ಇಲ್ಲಿಗೆ ಮೌಗ್ಲಿಯ ಕಾಡಿನ ಸಂಬಂಧ ಹರಿದಂತೆ ಆಯಿತು. ಮನುಷ್ಯ ನಾಥೂ (ಮೌಗ್ಲಿ) ಮನುಷ್ಯರ ಬಳಿ ಸೇರಿ ಮನುಷ್ಯನಾದನು. ಕಾಡಿನ ಅಂಚಿನ ವರೆಗೆ ಬಂದು ಬೂದಣ್ಣ ಸೋದರರು ಮೌಗ್ಲಿಗೆ ವಂದಿಸಿ ಹಿಂದಿರುಗಿದುವು.

ಮೌಗ್ಲಿಯು ತನ್ನ ಹೆತ್ತ ತಾಯಿ, ಮೆಸ್ಸವ್ವಳ ಮನೆ ಸೇರಿ ಬಾಗಿಲು ತಟ್ಟುವವರೆಗೆ ಕಾಡಿನ ಗೆಳೆಯರು ಹಾಡಿ ಹರಸಿದ ಬೀಳ್ಕೊಡುಗೆಯ ಹಾಡು ಕೇಳಿ ಬರುತ್ತಿತ್ತು.

"....... ಕಾಡಿನೊಲುಮೆ ಸದಾ ನಿನ್ನೊಡನೆ ಇರಲಿ!
ಕಾಡಿನೊಲುಮೆ ಸದಾ ನಿನ್ನನು ಪೊರೆಯಲಿ."

## ಬೀಳ್ಕೊಡುಗೆಯ ಹಾಡು
### (ವಿದಾಯ/ಹಾರೈಕೆ ಹಾಡು)

**ಬಾಲು:**

**ವನಪಥವನು ತೋರಿದ ವರ ಕರಡಿಗಾಗಿ ನೀನು।**
**ಮಾನವ ನಿಯಮವ ಕಾಪಾಡು, ಮುದಿ, ಕುರುಡ ಬಾಲುವ ನೋಡು॥**
**ಶುಚಿ, ಅಶುಚಿ ಎನದಿರು, ಹೊಸದು ಹಳೆಯದೆಂದೆಣಿಸದಿರು,**
**ಹಗಲು ಸಮರಾತ್ರಿ ನೋಡದಿರು।**
**ಎಡ ಬಲವೆಂಬ ಭಾವವ ಬಿಟ್ಟು, ಆ ದಾರಿಯಲಿ ನೀ ಚಲಿಸು॥**



ಜೀವವೆಲ್ಲಕೆ ಮಿಗಿಲೆಂದು, ನಿನ್ನನೊಲಿದ ಬಾಲುವಿಗಾಗಿ।
ನರರ ಗುಂಪು (ನಿನ್ನ) ಬಾಧಿಸಲು, ತಬಾಕಿ ಬಂದು ಹಾಡುವನೆನ್ನು॥
ನರರ ಗುಂಪು ಕೇಡೆಸಗಲು, ಕೊಲ್ಲಲು ಷೇರ್‌ಖಾನ್ ಇರುವನೆನ್ನು।
ಕತ್ತಿ, ಚೂರಿಗಳ, ನೀನೆಳೆದಿರೆ, ಬಿಡದೆಲೆ ನಿಯಮ ಪಾಲಿಸು॥

ಮಧು, ಕದಂಬವೇ, ಕಂದ ನೊಂದಿಹನು, ಕಾಪಾಡಿರಿ।
ವನವೇ, ಜಲವೇ, ವಾಯುವೇ ತರುವೇ। ಕಂದನನು ಕಾಪಾಡಿರಿ॥
ಕಾಡಿನೊಲುಮೆ ಸದಾ ನಿನ್ನೊಡನೆ ಇರಲಿ। ದೇಹಬಲ, ವಿವೇಕ ವಿನಯಗಳು ಕೂಡಲಿ।
ಕಾಡಿನೊಲುಮೆ ಸದಾ ನಿನ್ನನು ಪೊರೆಯಲಿ॥



"ಕಾ":

ಕೋಪವದು ಭಯದ ಮೂಟೆ ದಿಟವು। ಅನಿಮೇಷರ ಕಣ್ಣು ಸ್ಫುಟವು।
ನಾಗರ ವಿಷಕೂ, ಆದರ ಮಾತಿಲ್ಲ, ಮದ್ದಿಲ್ಲ ಕೇಳು।
ಮನ ತೆರೆದ ಮಾತು, ಶಕ್ತಿಯುತ ವಿನಯ ವೇಳು॥

ಆಳಮೀರಿ ಮೈ ಬೀಸದಿರು। ಕೊಳೆತ ಬುಡಕೆ ನೀರೆರೆಯದಿರು।
ಜಿಂಕೆ, ಮೇಕೆಗಳ ಶಕ್ತಿಯನು ನೋಡು। ಸಾವನಾಹ್ವಾನಿಸದಿರು॥

ದಣಿವಾಗೆ ನಿದ್ರಿಸಬೇಕೆ? ಗುಪ್ತ, ಗಹನ ಸ್ಥಾನವದು ಜೋಕೆ!
ಮರೆತರದೇ ನಿನ್ನ ಸಾವು, ಹೊಂಚುತ್ತ ಬಳಿ ಬಂದೀತು॥

ಹಿಂದೆ, ಮುಂದೆ, ಎಡ ಬಲಗಳಲಿ ಮೈ ತೊಳೆಯಬೇಕು,
ಬಾಯಿಯನು ಮುಚ್ಚಿರಬೇಕು॥
ಹಳ್ಳಕೊಳ್ಳ, ನೀಲ ಕೊಳವೇ, ಕಾನನವೇ। ಪಿಳ್ಳೆಯನು ಕಾಪಾಡಿರಿ॥

ವನವೇ, ಜಲವೇ, ವಾಯುವೇ, ತರುವೇ। ಕಂದನನು ಕಾಪಾಡಿರಿ॥
ಕಾಡಿನೊಲುಮೆ ಸದಾ ನಿನ್ನೊಡನೆ ಇರಲಿ। ದೇಹಬಲ, ವಿವೇಕ, ವಿನಯಗಳು ಕೂಡಲಿ।
ಕಾಡಿನೊಲುಮೆ ಸದಾ ನಿನ್ನನು ಪೊರೆಯಲಿ॥



**ಬಘೀರ:**

ಬೋನಿನೊಳಗೆ ಜನಿಸಿದೆನು ನಾನು। ಮಾನವ ಮೌಲ್ಯಗಳನು ಅರಿತಿಹೆನು ನಾನು॥
ಮರಿ, ಜೋಕೆ! ಮನುಜರೊಡನಿರಲು,
ಬೆಳಗು, ಸಂಜೆಯ ಮಬ್ಬಿನಲಿ, ತೊಡಕು ಹಾದಿಯ ಹಿಡಿಯದಿರು।
ಸಭೆಯೋ, ಗುಂಪೋ, ಬೇಟೆಯೋ, ಗವಿಯೋ, ಕಪಟ ಮಾನವರ ಜೊತೆ ಸೇರದಿರು।
ತಮಾಷೆಗೆ ಬಾ! ಎಂದಾಗ, ಅಶಕ್ತರನು ಕಾಡಿ, ನಿನ್ನ ಕರೆದಾಗ ಮೌನ ವಹಿಸು।
ನಿನಗೆ ಆತ್ಮಸ್ತುತಿ ಬೇಡ ಕಪಿಗಳಂತೆ। ತಾಳ್ಮೆ ವಹಿಸು, ಎಂದಿಗೂ ಅದ ಪಾಲಿಸು।
ಕೂಗು, ಹಾಡು, ಸಂಕೇತಗಳಿಗೆ ಭ್ರಮಿಸದಿರು। ಬೇಟೆ ದಾರಿಯನು ದಾಟದಿರು॥
ಬೆಳಗಿನ ಮಂಜೇ, ಸಂಜೆಯ ಬೆಳಕೇ, ಮೃಗಗಳೇ, ಕಂದನನು ಕಾಪಾಡಿರಿ।
ವನವೇ, ಜಲವೇ, ವಾಯುವೇ, ತರುವೇ, ಕಂದನನು ಕಾಪಾಡಿರಿ॥
ಕಾಡಿನೊಲುಮೆ ಸದಾ ನಿನ್ನೊಡನೆ ಇರಲಿ। ದೇಹಬಲ, ವಿವೇಕ, ವಿನಯಗಳು ಕೂಡಲಿ।
ಕಾಡಿನೊಲುಮೆ ಸದಾ ನಿನ್ನನು ಪೊರೆಯಲಿ॥

**ಮೂವರೂ ಒಂದಾಗಿ:**

ಜ್ವಲಿಸುತಿಹ ಕೆಂಪಲರು, ನಮಗೆ ಕಾದಿರುವ ಭಯ, ನೀ ಕ್ರಮಿಸುವ ಹಾದಿಯಲಿ
ಮನುಜಮಾರ್ಗದಲಿ, ವರ ಸಂಧ್ಯೆಯಲಿ।
ಬಾನಂಗಳಕೆ ದೂರ, ನರರ ನೆಲೆಯೊಳು ಸೆರೆಯಾಗಿ, ನಮ್ಮ ಕಾಲ್ಸಪ್ಪಳವ ಕೇಳುತ್ತ
ನೀ ಮಲಗಿರುವ ರಾತ್ರಿ ಸಮಯದಲಿ।
ಕಾಡನು ನೆನೆದು, ಹಾತೊರೆಯುತಿರಲು, ಬಿಡಲಾರದ ದಿನದ ದುಡಿಮೆಗೆಂದು
ನೀ ಕಣ್ಬಿಡುವ ಮುಂಜಾನೆ ಮಂಜಿನಲಿ।
ದಿನಮಣಿ ದೇವನೇ, ಕಂದನನನುದಿನ ಪೊರೆಯಿರೀ।
ವನವೇ, ಜಲವೇ, ವಾಯುವೇ ತರುವೇ ಕಂದನನು ಕಾಪಾಡಿರಿ।
ಕಾಡಿನೊಲುಮೆ ಸದಾ ನಿನ್ನೊಡನೆ ಇರಲಿ। ದೇಹಬಲ, ವಿವೇಕ, ವಿನಯಗಳು ಕೂಡಲಿ।
ಕಾಡಿನೊಲುಮೆ ಸದಾ ನಿನ್ನನು ಪೊರೆಯಲಿ॥

---

* ಅನಿಮೇಷ = ದೇವರು; ** ಅಲರು = ಬೆಂಕಿ.

# ಪ್ರಸಂಗ 9

# ದೇವರಲೀಲೆ



## ಭಾಗ 1 – ಮೌಗ್ಲಿ (ನಾಥೂ) ಅರಣ್ಯರಕ್ಷಕನಾದುದು—ವಿವಾಹ

ಭಾರತ ಸರ್ಕಾರಕ್ಕೆ ಅಪಾರವಾದ ಆದಾಯವನ್ನು ತರುವ ಇಲಾಖೆಗಳಲ್ಲಿ ಅರಣ್ಯ ಇಲಾಖೆಯು ಪ್ರಮುಖವಾದುದು. ಆ ಇಲಾಖೆಯಲ್ಲಿ ಗಿಸ್ಬರ್ನ್ ಎಂಬ ಹೆಸರಿನ ನಿಷ್ಠಾವಂತ ಅಧಿಕಾರಿಯು ಇದ್ದನು. ಕಾಡಿನಲ್ಲಿ ಒಂಟಿಯಾಗಿ ಅಲೆಯುತ್ತಾ, ಪರಿಶುದ್ಧವಾದ ಜೀವನವನ್ನು ನಡೆಸುತ್ತಿದ್ದನು. ಮನೆಕೆಲಸ ಮಾಡಿಕೊಂಡು, ಉಸ್ತುವಾರಿ ಇರಲು ನಂಬಿಕಸ್ತನಾದ ಅಬ್ದುಲ್ ಗಫೂರನೆಂಬ ಬಟ್ಲರನನ್ನು (ಅಡಿಗೆ ಪರಿಚಾರಕ) ನೇಮಿಸಿಕೊಂಡಿದ್ದನು. ಆ ಮುದುಕ ಗಫೂರನಿಗೆ 13 ವರ್ಷದ ಒಬ್ಬಳೇ ಮಗಳಿದ್ದಳು. [ಅವಳನ್ನು "ಕನ್ಯಾ" ಎಂದು ಕರೆಯೋಣ, ಕಾರಣ ಅವಳಿಗೆ ನಾಥೂ ಪರಿಚಯವಾಗಿ, ಸಂಬಂಧ ಬೆಸೆದದ್ದು ಕನ್ಯಾ ನದಿ ತೀರದಲ್ಲಿ.] ಕೈ ತುಂಬಾ ಸಂಬಳ ಬರುತ್ತಿದ್ದ ಗಿಸ್ಬರ್ನನಿಗೆ ಪರಿಚಾರಕನಾದ ಕಾರಣ ಗಫೂರನಿಗೂ ಸಹ, ಕೈ ತುಂಬಾ ಹಣ ಸೇರುತ್ತಿತ್ತು.



ಇವರು ವಾಸ ಮಾಡುತ್ತಿದ್ದ ಗೊಂಡಾರಣ್ಯದ ನಡುವಿನ ಬಂಗಲೆಯ ಸಮೀಪದಲ್ಲಿ "ಕನ್ಯಾ" ನದಿ ಹರಿಯುತ್ತಿತ್ತು. ಆ ನದೀ ತೀರದಲ್ಲಿ, ಒಂದು ಹುಲಿಯು ಹಳ್ಳಿಗನೊಬ್ಬನನ್ನು ಕೊಂದುಹಾಕಿತ್ತು. ಆ ನರಭಕ್ಷಕ ಹುಲಿಯನ್ನರಸುತ್ತಾ, ಅದು ಇರಬಹುದಾದ ನೆಲೆಯ ಬಗ್ಗೆ ಕಾನೇವಾಡದ ಹಳ್ಳಿಗರೊಡನೆ, ಅರಣ್ಯಾಧಿಕಾರಿ ಗಿಸ್ಬರ್ನನು ಸಂವಾದ ನಡೆಸುತ್ತಿದ್ದನು.



ಅಕಸ್ಮಾತ್ತಾಗಿ ಅಲ್ಲಿಗೆ ಬಂದ ನಾಥೂವು, ಸಂವಾದ ನಡೆದಿದ್ದ ಹುಲಿಯ ಬಗ್ಗೆ ಎಲ್ಲಾ ವಿವರಗಳನ್ನು ತಿಳಿಸಿದ್ದಲ್ಲದೆ, ಅದು ಅಡಗಿರಬಹುದಾದ ನೆಲೆಯನ್ನು ತೋರಿಸುವುದಾಗಿ ಹೇಳಿದನು. ಇದರಿಂದ ಹೆದರಿದ ಹಳ್ಳಿಗರು ಹಿಂದಿರುಗಿದರು. ಮೌಗ್ಲಿಯ ಜೊತೆ ಗಿಸ್ಬರ್ನ್ ಮಹಾಶಯನು, ಆ ಹುಲಿಯು ನರರಕ್ತವನ್ನು ಹೀರಿ, ಮತ್ತೇರಿ ಮಲಗಿದ್ದ ಸ್ಥಳವನ್ನು ಸೇರಿ, ಆ ಹುಲಿಯನ್ನು ಗುಂಡಿಟ್ಟು ಕೊಂದು ಹಾಕಿದನು.

ಅಂದಿನಿಂದ ಮೌಗ್ಲಿ ಮತ್ತು ಗಿಸ್ಬರ್ನ್ ಇವರ ನಡುವಣ ಪರಿಚಯವು, ಪರಸ್ಪರ ಸನ್ನಿಹಿತವಾಗಿ, ಕಾಲಕ್ರಮದಲ್ಲಿ ವಿಶ್ವಾಸಾರ್ಹತೆಗೆ ದಾರಿ ಮಾಡಿತು. ಕಾಡಿನಲ್ಲೇ ಬೆಳೆದು ಬಾಳಿದ ನಾಥೂವಿನ ಅದ್ಭುತಶಕ್ತಿ ಸಾಮರ್ಥ್ಯಗಳಿಗೆ ಗಿಸ್ಬರ್ನನ ಮನಸ್ಸು ಆಶ್ಚರ್ಯ, ಅಭಿಮಾನ ಗಳಿಂದ ತುಂಬಿತು. ಇದನ್ನು ಕಂಡ ಗಫೂರನಿಗೆ ಮಾತ್ರ ನಾಥೂ ಬಗ್ಗೆ ಒಂದು ರೀತಿಯ ಅಸೂಯೆ ಉಂಟಾಯಿತು. ಹೊಸದಾಗಿ



ಪರಿಚಯವಾದ ಅವನನ್ನು ನಂಬಲಾಗದು. ಬಹುಶಃ ಅವನು ಗಿಸ್ಬರ್ನ್ ಸಾಹೇಬರ ಆಸ್ತಿ ಮತ್ತು ಹಣದ ಮೇಲೆ ಕಣ್ಣು ಹಾಕಿರಬೇಕೆಂದು ಶಂಕಿಸಿದನು. ಅದನ್ನೇ ಗಿಸ್ಬರ್ನನ ಕಿವಿಯಲ್ಲಿ ಊದಿದನು. ಗಿಸ್ಬರ್ನನು ಗಫೂರನನ್ನು ಗದರಿಸಿದನು. ಅದೇ ಸಂಜೆ ಗಿಸ್ಬರ್ನನ ಅನುಮಾನ ಪರಿಹಾರಕ್ಕಾಗಿ ಮೌಗ್ಲಿಯು ಗಾವುದ ದೂರದಲ್ಲಿ ಮೇಯುತ್ತಿದ್ದ ಗೂಳಿಯನ್ನು ಕ್ಷಣಾರ್ಧದಲ್ಲಿ ಬಂಗಲೆಯ ಬಳಿ ಕರೆಸಿದನು. ನುಗ್ಗಿ ಬಂದ ಆ ವಿಚಿತ್ರ ರೀತಿಯ ಗೂಳಿಯನ್ನು ಮಾತನಾಡಿಸಿ, ಮತ್ತೂ ಪರಮಾಶ್ಚರ್ಯ ಕರವಾಗಿ ಬೆನ್ನು ತಟ್ಟಿ ಮತ್ತೆ ಹಿಂದಕ್ಕೆ ಕಳುಹಿಸಿದನು. ಆದರೆ ಪ್ರಾಣಿಗಳ, ಕಾಡುಪ್ರಾಣಿಗಳ ಮೇಲೆ, ಈ ರೀತಿ ಪ್ರಭಾವವನ್ನು ಬೀರಲು ಹೇಗೆ ಸಾಧ್ಯವಾಯಿತು? ಎಂಬುದನ್ನು ಮಾತ್ರ ಹೇಳಲಾರದೆ ಹೋದನು.

ಮೌಗ್ಲಿಯು ತನ್ನ, ಗಿಸ್ಬರ್ನನ ಸನ್ನಿಹಿತತ್ವತೆಯ ಕಾರಣ, ಆಗಾಗ್ಗೆ ಬಂದು ಹೋಗುತ್ತಿದ್ದನು. ಹಾಗೆ ಬಂದಾಗ ಗಿಸ್ಬರ್ನನ ಕುದುರೆಯನ್ನು ವಿಚಾರಿಸಿಕೊಳ್ಳುವುದು ಅವನು ಮಾಡುತ್ತಿದ್ದ ಮುಖ್ಯ ಕೆಲಸ. ಹೀಗಿರುವಾಗ ಒಂದು ದಿನ ದೂರದಲ್ಲಿದ್ದ ಮೌಗ್ಲಿಯು, ಕನ್ಯಾ ನದಿಯ ನೀರನ್ನು ಕೊಡಕ್ಕೆ ತುಂಬಿಸಿ ಕಂಕುಳಲ್ಲಿ ಹೊತ್ತು, ಗಫೂರನ ಮಗಳಾದ ಕನ್ಯಾ ಬಂಗಲೆಗೆ ಹೋಗುವುದನ್ನು ಕಂಡನು. ವಯಸ್ಸಿನ ಪ್ರಭಾವವೆನ್ನಿ, ವಸಂತಕಾಲದ ಮಹಿಮೆಯೆನ್ನಿ, ಅವನಲ್ಲಿ ಕನ್ಯಾ ಬಗ್ಗೆ ಅನುರಾಗ

ಉಂಟಾಯಿತು. ಅದು ಪರಿಚಯಕ್ಕೆ, ಸ್ನೇಹಕ್ಕೆ, ಪ್ರಣಯಕ್ಕೆ ತಿರುಗಿತು. ಇದನ್ನು ಗಫೂರನು ಗಮನಿಸಿದನು.

ಆಗಾಗ ಬಂಗಲೆ ಬಳಿ ಬರುತ್ತಿದ್ದ ಮೌಗ್ಲಿಯು ಪ್ರತಿದಿನ ಬರಲು ಪ್ರಾರಂಭಿಸಿದನು. ಗಿಸ್ಬರ್ನನ ಕುದುರೆಯನ್ನು ವಿಚಾರಿಸುವುದರ ಜೊತೆಗೆ, ಗಫೂರನಿಗೆ ಅವನ ಕೆಲಸಗಳಲ್ಲಿ ಸಹಾಯ ಮಾಡುತ್ತಿದ್ದನು. ಗಫೂರನು ಏನೇ ಮಾಡಿದರೂ, ಕನ್ಯಾಳಿಗಾಗಿ, ಅದನ್ನು ಕಡೆಗಣಿಸಿ ಅವನಿಗೆ ನೆರವಾಗುತ್ತಿದ್ದನು. ಮೊದಲೇ



ಅಸೂಯಾಪರನಾದ ಗಫೂರನು, ಮೌಗ್ಲಿಯು ತನ್ನ ಮಗಳೊಡನೆ ಸ್ನೇಹ ಬೆಳೆಸಿದ್ದುದನ್ನು ಗಮನಿಸಿದ್ದನಾದ ಕಾರಣ, ಅವಕಾಶ ಸಿಕ್ಕಾಗಲೆಲ್ಲಾ ಅವನನ್ನು ಹೀಯಾಳಿಸುತ್ತಾ, ಹಿಂಸೆ ಕೊಡುತ್ತಾ ಇದ್ದನು. ತನ್ನ ಮಗಳನ್ನೂ ಸಹ ಕಟ್ಟು ದಿಟ್ಟು ಮಾಡಲು ಹೊಡೆದು ಬೈದು ಮಾಡುತ್ತಿದ್ದನು. ಹಾಗೆ ಅವಳು ಹಿಂಸೆಗೊಳಗಾದಾಗಲೆಲ್ಲಾ, ಮೌಗ್ಲಿಯಿಂದ ಅವಳಿಗೆ ಉಪಶಮನ, ಸಾಂತ್ವನ ದೊರಕುತ್ತಿತ್ತು. ಹೀಗೆ ಹಲವಾರು ದಿನಗಳು ಕಳೆದುವು.

ಗಿಸ್ಬರ್ನನು ಒಮ್ಮೆ ಕೆಲವು ಕಾಲ ಸಂಚಾರ ಹೊರಡಬೇಕಾಯಿತು. ಜೊತೆಯಲ್ಲಿ ಕರೆದೊಯ್ಯಲು, ಎಷ್ಟು ಹುಡುಕಿದರೂ ಮೌಗ್ಲಿಯು ಎಲ್ಲಿರುವನೆಂದು ತಿಳಿಯಲಿಲ್ಲ. ಆದರೆ, ಅದೇ ಸಂಜೆ, ಗಿಸ್ಬರ್ನನು ಬಿಡಾರ ಹೂಡಿದ್ದ ಸ್ಥಳಕ್ಕೆ ಮೌಗ್ಲಿಯು ಬಂದನು. ಮಾರನೆಯ ಬೆಳಗ್ಗೆ ವಿಶ್ರಮಿಸಿಕೊಳ್ಳುತ್ತಿದ್ದಾಗ, ಹರಿದಾರಿ (14 ಕಿ. ಮೀ.) ಆಚೆ ಏಳುತ್ತಿದ್ದ ಧೂಳನ್ನೂ, ಕೇಳುತ್ತಿದ್ದ ಶಬ್ದವನ್ನೂ ಗಮನಿಸಿದ ಮೌಗ್ಲಿಯು ಬಂಗಲೆಯಿಂದ ರೈಲ್ವೇಸ್ಟೇಶನ್ನಿಗೆ ಯಾರೋ ಕುದುರೆಯನ್ನು

ಕರೆದೊಯ್ಯುತ್ತಿರುವುದಾಗಿ ಗಿಸ್ಬರ್ನನಿಗೆ ತಿಳಿಸಿದನು. ಗಿಸ್ಬರ್ನನು ಇದನ್ನು ನಂಬಿಯೂ ನಂಬಲಾರದಾದನು. ಮೌಗ್ಲಿಯು, "ಇರಿ, ಆ ಕುದುರೆಯನ್ನು ಇಲ್ಲಿಗೇ ಕರೆಸುತ್ತೇನೆ" ಎಂದು ಹೇಳಿ ವಿಚಿತ್ರವಾಗಿ ಕೂಗು ಹಾಕಿದನು. ಸ್ವಲ್ಪ ಹೊತ್ತಿನೊಳಗೆ ಗಿಸ್ಬರ್ನನ ಕುದುರೆಯೂ, ಅದರ ಹಿಂದೆ ಹೆದರಿ, ಬೆದರಿ, ಕಂಗಾಲಾಗಿ, ದೇಹಾಲಸ್ಯದಿಂದ ಬೆವರಿ ನಡುಗುತ್ತಿದ್ದ ಗಫೂರನೂ ಬಂದು ನಿಂತರು.



ಗಿಸ್ಬರ್ನನು ಬಂಗಲೆ ಬಿಟ್ಟು ಸಂಚಾರ ಹೊರಟ ಮೇಲೆ, ಮೇಜಿನ ಡ್ರಾಯರ್‌ನಲ್ಲಿ ಅವರಿಟ್ಟಿದ್ದ 9 ತಿಂಗಳ ನಗದು ಸಂಬಳವನ್ನು ನೋಡಿದುದಾಗಿಯೂ, ದುರಾಶೆಯಿಂದ ಅದನ್ನು ಕದ್ದು ಓಡಿಹೋಗಲು ತಾನು ಪ್ರಯತ್ನಿಸಿದ್ದಾಗಿಯೂ ಹೇಳಿದನು. ಮುಂದುವರೆದು, ಆ ಹಣದಿಂದ ಭೂಮಿ, ಕಾಣಿ ಮಾಡಿಕೊಂಡು ಹೊರಗೆ ಸುಖವಾಗಿರಲು ಆಸೆಪಟ್ಟುದಾಗಿ ತಿಳಿಸಿದನು. ಆದರೆ ಮೌಗ್ಲಿಯ ಅಧೀನ ದಲ್ಲಿರುವ ದೆವ್ವಗಳ ಪ್ರಭಾವದಿಂದ ತಾನು ಇಲ್ಲಿ ಬಂದು ಬಿದ್ದಿರುವುದಾಗಿಯೂ, ಮಾಡಿರುವುದು ಮಹಾಪರಾಧವೆಂದೂ ತಪ್ಪೊಪ್ಪಿಕೊಂಡನು. ಯಜಮಾನರು ಹಣ, ಒಡವೆ ಇತ್ಯಾದಿ ವಾಪಸ್ಸು ತೆಗೆದುಕೊಂಡು, ತನ್ನನ್ನು ಸೆರೆಮನೆಗೆ ಕಳುಹಿಸಬೇಕೆಂದು ಪ್ರಾರ್ಥನೆ ಮಾಡಿಕೊಂಡು ಗೋಳಾಡಿದನು. ಗಿಸ್ಬರ್ನನು ದೊಡ್ಡ ಮನಸ್ಸಿನಿಂದ ಅವನನ್ನು ಕ್ಷಮಿಸಿ ಮತ್ತೆ ಬಂಗಲೆಗೆ ಕಳುಹಿಸಿದನು. ಅಂದಿನಿಂದ ಗಿಸ್ಬರ್ನ್ ಮತ್ತು ಮೌಗ್ಲಿ ಇವರ ನಡುವಣ ಬಾಂಧವ್ಯ ಮತ್ತಷ್ಟು ಹೆಚ್ಚಿತು.



ಅದೇ ದಿನ ಸಂಜೆ, ಗಿಸ್ಬರ್ನನ ಮೇಲಧಿಕಾರಿಯಾದ ಮುಲ್ಲರನು, ಮೌಗ್ಲಿಯನ್ನು ಕಂಡಕೂಡಲೇ "ವನದೇವತೆ" ಎಂದು ಉದ್ಗರಿಸಿ ಅವನನ್ನು ಮೆಚ್ಚಿಕೊಂಡನು. ಮುಲ್ಲರನು ಭಾರತಸರ್ಕಾರದ ಅತ್ಯುನ್ನತ, ಅರಣ್ಯಗಳ ಮೇಲ್ವಿಚಾರಕ ಅಧಿಕಾರಿ ಆಗಿದ್ದನು. ಬುದ್ಧಿಶಾಲಿಯೂ, ದಕ್ಷನೂ ಆದ ಈ ಗಣ್ಯ ಜರ್ಮನ್ ಅಧಿಕಾರಿಯು ನೋಟ ಮಾತ್ರದಿಂದ ಮೌಗ್ಲಿಯ ಪೂರ್ವೋತ್ತರಗಳನ್ನು ಊಹಿಸಿ ಹೇಳಬಲ್ಲವನಾಗಿದ್ದನು. ಹಾಗಾಗಿ ಅವನ ಮೆಚ್ಚುಗೆಯು ಮಾತಿಗೆ ಮಾತ್ರ ಸೀಮಿತವಾಗಿರಲಿಲ್ಲ. ಮೌಗ್ಲಿಯು ಗಿಸ್ಬರ್ನನ ಅಧೀನದಲ್ಲಿ ಅರಣ್ಯರಕ್ಷಕನಾಗಿ, ಸೇವೆಗೆ ಸೇರಬೇಕೆಂದೂ, ಅದು ತನ್ನ ಅಪೇಕ್ಷೆ ಎಂದೂ, ತಾನು ಹಿಂದಿರುಗಿದ ಬಳಿಕ ಬರಹ ಮೂಲಕ ಲಿಖಿತ ಆದೇಶವನ್ನು ಕಳುಹಿಸುವುದಾಗಿಯೂ ತಿಳಿಸಿದನು. ಈ ಮುಂಚೆ ಗಿಸ್ಬರ್ನನೂ ಸಹ ಅದೇ ರೀತಿ ಬಯಸಿ, ಮೌಗ್ಲಿಯನ್ನು ಸೇವೆಗೆ ಸೇರಲು ಕರೆದಾಗಲೆಲ್ಲಾ, ಯೋಚಿಸಿ ಹೇಳುವುದಾಗಿ ಮೌಗ್ಲಿಯು ಮುಂದೂಡುತ್ತಿದ್ದನು. ಆದರೆ ಆ ಕೋರಿಕೆಯು ಈಡೇರುವ ಕಾಲ ಸನ್ನಿಹಿತವಾಯಿತು. ಮೌಗ್ಲಿಯನ್ನು ಕಂಡ ಮೇಲೆ, ಮುಲ್ಲರನಿಗೆ ಭಗವಂತನ ಲೀಲಾವಿನೋದಗಳಲ್ಲಿಯೂ; ದಯೆ, ಅನುಗ್ರಹಗಳಲ್ಲಿಯೂ, ಮಾನವನ ಅಪೂರ್ವಶಕ್ತಿಯಲ್ಲಿಯೂ ನಂಬಿಕೆಯು ಹೆಚ್ಚಿತು. ಮುಲ್ಲರನು ಕೇಂದ್ರಕಾರ್ಯಾಲಯಕ್ಕೆ ಹಿಂದಿರುಗಿದ ಕೂಡಲೇ ಮೌಗ್ಲಿಯನ್ನು ಅರಣ್ಯರಕ್ಷಕನನ್ನಾಗಿ ನೇಮಿಸಿ ಆದೇಶ ಹೊರಡಿಸಿದನು. ಗಿಸ್ಬರ್ನನ ಅಧೀನದಲ್ಲಿ ಮೌಗ್ಲಿಯು ಅರಣ್ಯರಕ್ಷಕನಾಗಿ ನೆಲೆಗೊಳ್ಳುವ ಕಾಲ ಹತ್ತಿರ ಬಂತು.

ಒಂದು ವಾರ ಕಳೆದಿರಬಹುದು. ನಿದ್ರಿಸುತ್ತಿದ್ದ ಗಿಸ್ಬರ್ನ್ ಸಾಹೇಬನನ್ನು, ಗಫೂರನು ಎಬ್ಬಿಸಿದನು. ಮೌಗ್ಲಿಯು ತನ್ನ ಮಗಳನ್ನು ಕದ್ದೊಯ್ದಿರುವುದಾಗಿಯೂ, ತನ್ನ ಸರ್ವನಾಶವಾಯಿತೆಂದೂ, ದುಗುಡವನ್ನು ವ್ಯಕ್ತಪಡಿಸಿದನು. ಅವರಿಬ್ಬರೂ ಒಟ್ಟಿಗಿರುವುದನ್ನು ತಾನು ತೋರಿಸುವುದಾಗಿ ಹೇಳಿ, ಬಂದೂಕನ್ನು ಕೈಗಿತ್ತು, ಸಾಹೇಬರು ಮೌಗ್ಲಿಯನ್ನು ಗುಂಡಿಟ್ಟು ಹೊಡೆಯಬೇಕೆಂದು ಗೋಗರೆದನು. ಆ ಬಳಿಕ ಗಿಸ್ಬರ್ನ್ ಸಾಹೇಬರನ್ನು ಕರೆದುಕೊಂಡು ಬಂದು, ಅರಣ್ಯ ಮಧ್ಯದಲ್ಲಿ, ನದೀ ತೀರದಲ್ಲಿ, ಗಿಡಮರಗಳ ಮಧ್ಯೆ ಅವರಿಬ್ಬರೂ ಕುಳಿತಿರುವುದನ್ನು ತೋರಿಸಿದನು.

ಅಲ್ಲೊಂದು ಬಂಡೆಯ ಮೇಲೆ ಕನ್ಯಾ ಪಕ್ಕದಲ್ಲಿ ಮೌಗ್ಲಿಯು ಕುಳಿತಿದ್ದಾನೆ. ಕೈಯಲ್ಲಿ ಕೊಳಲು ಹಿಡಿದು, ಸುಶ್ರಾವ್ಯವಾಗಿ ನುಡಿಸುತ್ತಿದ್ದಾನೆ. ಕನ್ಯಾ ತದೇಕ ಚಿತ್ತಳಾಗಿ, ಮೌಗ್ಲಿಯನ್ನು ಕಣ್ತುಂಬಿಸಿಕೊಂಡು, ಕೊಳಲ ನಾದವನ್ನು ಕೇಳಿಸಿಕೊಳ್ಳುತ್ತಿದ್ದಾಳೆ. ಗಾನಕ್ಕೆ ಸರಿಯಾಗಿ ಬೂದಣ್ಣ ಸೋದರರು ನರ್ತಿಸುತ್ತಿದ್ದಾರೆ. (ಹಿಂಬದಿಯ ರಕ್ಷಾಪುಟದ ಚಿತ್ರ ನೋಡಿ) ಗಿಸ್ಬರ್ನನೂ ಮೈಮರೆತು ಆ ದೃಶ್ಯವನ್ನೂ, ವೇಣುಗಾನವನ್ನೂ ಸವಿಯುತ್ತಿದ್ದಾನೆ. ಇದ್ದಕ್ಕಿದ್ದಂತೆ ತೋಳಗಳ ನೃತ್ಯ ನಿಂತಿತು. ಮೌಗ್ಲಿಯೂ ಈ ಮುಂಚೆ ಕಾಲು ಸಪ್ಪಳ ಬಂದು ನಿಂತಿದ್ದನ್ನು ಗಮನಿಸಿದ್ದನು. ಕೊಳಲುನಾದವನ್ನು ನಿಲ್ಲಿಸಿ, ಸುಕುಮಾರಿ ಕನ್ಯಾಳನ್ನು ಉದ್ದೇಶಿಸಿ, "ಈ ಪ್ರಾಣಿಗಳು ನನ್ನ ಸಹೋದರರು, ಸಹಚರರು, ಸಹಾಯಕರು, ರಕ್ಷಕರು" ಎಂದು ಪರಿಚಯಿಸಿದನು. ತಾನು ಅವುಗಳೊಡನೆ ಬೆಳೆದು ದೊಡ್ಡವನಾದುದು, ಕಲೆತು ಬಾಳಿದುದು ಎಲ್ಲವನ್ನೂ ಸವಿಸ್ತಾರವಾಗಿ ವಿವರಿಸಿದನು. ಕನ್ಯಾ, ಈಗ ನೋಡು, ನಿನ್ನ ತಂದೆ ಗಿಸ್ಬರ್ನ್ ಸಾಹೇಬರನ್ನು ಕರೆತಂದಿದ್ದಾನೆ. ಅವರಿಬ್ಬರೂ ನನ್ನ ಹಿಂದೆ ನಿಂತಿದ್ದಾರೆ. ನಿನ್ನಪ್ಪ ನಿನ್ನನ್ನು ಹೊಡೆದು, ಹಿಂಸೆ ಕೊಟ್ಟಿರುವುದಕ್ಕಾಗಿ, ಈ ತೋಳಗಳಿಗೆ ಹೇಳಿ, ಪ್ರತೀಕಾರ ತೀರಿಸಬೇಕೆಂದಿದ್ದೇನೆ. ನೋಡುತ್ತೀಯಾ? ತೀರಿಸಲೇ?" ಎಂದು ಕೇಳಿದನು. ಆ ಮಾತು ಕೇಳಿದ್ದೇ ತಡ, ಗಫೂರನು ಬಂಗಲೆಗೆ ಓಡಿದನು. ತೋಳಗಳ ಕಾಪಿನಲ್ಲಿ, "ಕನ್ಯಾ"ನನ್ನು ಮೌಗ್ಲಿಯು ಬಂಗಲೆಗೆ ಕಳುಹಿಸಿದನು.

ಆ ಬಳಿಕ ಗಿಸ್ಬರ್ನನೊಡನೆ ಮಾತುಕತೆ ನಡೆಸಿ ತನ್ನ ಕನ್ಯಾಳ ಪರಿಚಯದಿಂದ ಹಿಡಿದು ಈ ವರೆಗಿನ ನಡೆನುಡಿಗಳನ್ನು ವಿವರಿಸಿದನು. ಕನ್ಯಾಳನ್ನು ತನ್ನ ಜೀವನ ಸಂಗಾತಿಯನ್ನಾಗಿ ಮಾಡಿಕೊಳ್ಳಲು ಇಷ್ಟಪಟ್ಟಿರುವುದಾಗಿಯೂ, ಸಾಹೇಬರು ಸಹಾಯ ಮಾಡಬೇಕಾಗಿಯೂ ಕೇಳಿಕೊಂಡನು. ಅದರ ಫಲವಾಗಿ, ಮುಲ್ಲರನ ಆದೇಶದಂತೆ, ಮೌಗ್ಲಿಯು, ಗಿಸ್ಬರ್ನನ ಅಧೀನದಲ್ಲಿ ಅರಣ್ಯರಕ್ಷಕನಾಗಬೇಕು, ಗಫೂರನು ತನ್ನ ಮುದ್ದುಮಗಳು ಕನ್ಯಾಳನ್ನು ಮೌಗ್ಲಿಗೆ ಕೊಟ್ಟು ವಿವಾಹ ನಡೆಸಬೇಕು ಎಂದು ತೀರ್ಮಾನವಾಯಿತು. ಮೌಗ್ಲಿಯು ಒಪ್ಪಿಕೊಂಡನು. ಗಫೂರನು ಇಷ್ಟವಿಲ್ಲದೆ ಇದ್ದರೂ, ಗಿಸ್ಬರ್ನ್ ಸಾಹೇಬರ ಮಾತಿಗೆ ಮಣಿದು, ಮರುದಿನವೇ ವಿವಾಹ ಕಾರ್ಯಕ್ರಮ ನಡೆಸಿ, ಕನ್ಯಾಳನ್ನು ಮೌಗ್ಲಿಗೆ ಒಪ್ಪಿಸಿದನು.

# ದೇವರ ಲೀಲೆ

## ಭಾಗ 2 – ಮೌಗ್ಲಿಯು ತಂದೆಯಾದನು

ವಿವಾಹಾನಂತರದಲ್ಲಿ ಮೌಗ್ಲಿ ಮತ್ತು ಕನ್ಯಾ ಅನ್ಯೋನ್ಯವಾಗಿ ಜೀವನ ಸಾಗಿಸುತ್ತಿದ್ದಾರೆ. ಒಂದು ವರ್ಷ ನಿಮಿಷದಂತೆ ಕಳೆದಿದೆ.

ಮುಲ್ಲರನು ಕನ್ಯಾ ನದೀತೀರದಲ್ಲಿ ಗಿಸ್ಬರ್ನನೊಡನೆ ನಡೆದು ಬರುತ್ತಿದ್ದಾನೆ. ದೂರದಲ್ಲಿ ಬೆತ್ತಲೆ ಮಗುವೊಂದು ಮಲಗಿರುವುದನ್ನೂ ಅದರ ಸುತ್ತಲೂ, ನಾಲ್ಕು ತೋಳಗಳು ಸುತ್ತುತ್ತಿರುವುದನ್ನೂ ಗಮನಿಸಿದನು. ಕೂಡಲೇ ಬಂದೂಕನ್ನೆತ್ತಿ ಕುದುರೆ (ಟ್ರಿಗರ್) ಒತ್ತಿದನು. ಮುಲ್ಲರನು ಬಂದೂಕಿನ ಕುದುರೆ ಒತ್ತುವುದಕ್ಕೂ, ಗಿಸ್ಬರ್ನನು ಬಂದೂಕನ್ನು ಪಕ್ಕಕ್ಕೆ ತಳ್ಳುವುದಕ್ಕೂ ಸರಿಹೋಯಿತು. ಹಾರಿದ ಗುಂಡು ಗುರಿತಪ್ಪಿತು. ತೋಳಗಳು ಅಪಾಯದಿಂದ ಪಾರಾದುವು.



ಗುಂಡಿನ ಶಬ್ದವನ್ನು ಕೇಳಿಸಿಕೊಂಡವಳೇ, ಪಕ್ಕದ ಗುಡಿಸಿಲಿನಿಂದ ಹೆಂಗಸೊಬ್ಬಳು ಓಡಿ ಬಂದಳು. ಬಂದವಳೇ ಮಗುವನ್ನೆತ್ತಿಕೊಂಡಳು.. "ಯಾರೋ ಅದು? ನನ್ನ ಮನೆಯ ಪ್ರಾಣಿಗಳ ಮೇಲೆ ಗುಂಡು ಹಾರಿಸಿದ್ದು" ಎಂದು ಗದರಿದಳು.

ಆ ಹೊತ್ತಿಗೆ ಮುಲ್ಲರ್ ಮತ್ತು ಗಿಸ್ಬರ್ನರು ಅಲ್ಲಿಗೆ ಬಂದರು. ಗಿಸ್ಬರ್ನ್ ಸಾಹೇಬರ ಗುರುತು ಹತ್ತಿದ ಕನ್ಯಾ "ಸಾಹೇಬರು! ಕ್ಷಮಿಸಬೇಕು" ಎಂದು ಹೇಳಿ ವಂದಿಸಿದಳು. ಗಂಡನು ಮೀನು ಹಿಡಿಯಲು ಹೋಗಿರುವುದಾಗಿ ತಿಳಿಸಿದಳು. ಪ್ರಾಣಿಗಳನ್ನು ಕರೆದು ಸಾಹೇಬರಿಗೆ ನಮಸ್ಕಾರ ಮಾಡಿ ಎಂದಳು. ಬೂದಣ್ಣ ಸೋದರರು ನಾಲ್ವರೂ ನಾಲ್ಕೂ ಕಡೆಯಿಂದ ಬಂದು ವಂದಿಸಿ, ಸ್ವಾಗತ ಕೋರಿದುವು.

ಮುಲ್ಲರನನ್ನು ಕುರಿತು, ಈ ನಾಲ್ಕು ತೋಳಗಳು ಮೌಗ್ಲಿಯ ಸೋದರರು. ಈ ಒಂದು ವರ್ಷದಲ್ಲಿ ಅವೂ, ನನಗೆ ಸಹಾಯಕವಾಗಿವೆ ಎಂದು ತಿಳಿಸಿದಳು. ಈಗ ಗಿಸ್ಬರ್ನನು, ಸಾವಧಾನವಾಗಿ, ವಿವರವಾಗಿ, ಮೌಗ್ಲಿಯ ಚರಿತ್ರೆಯನ್ನು ವಿವರಿಸಿದನು. ಈ ಹೆಂಗಸೂ, ಆ ಮಗುವೂ, ವರ್ಷದ ಹಿಂದೆ ಮುಲ್ಲರನು "ವನದೇವತೆ" ಎಂದು ಮೆಚ್ಚಿದ್ದ ಮೌಗ್ಲಿಯ ಹೆಂಡತಿ ಮತ್ತು ಮಗು ಎಂದು ತಿಳಿಸಿದನು. ಮುಲ್ಲರನು ತನ್ನ ಆತುರಕ್ಕೆ ಸಂಕೋಚಪಟ್ಟುಕೊಂಡನು. ವಿವರಗಳು ತಿಳಿದ ಮೇಲೆ ಸಂಭ್ರಮ ಆಶ್ಚರ್ಯಗಳಿಂದ ಕೂಡಿ, ಸಂತೋಷಭರಿತನಾಗಿ, ಭಕ್ತಿಪರವಶತೆಯಿಂದ "ಅದ್ಭುತ, ಪರಮಾದ್ಭುತ. ದೇವರ ಲೀಲೆಯನ್ನು ಹೇಗೆ ವರ್ಣಿಸಲಿ? ನಾನೇ ಬುದ್ಧಿವಂತ ಎಂದುಕೊಂಡಿದ್ದೆ. ಇಂತಹವರು ನನಗೆ ಬೆಂಬಲ ವಾಗಿರುವಾಗ, ನನ್ನ ಅದೃಷ್ಟವೂ ನಿಜ, ಅದ್ಭುತ" ಎಂದು ಅಚ್ಚರಿಗೊಂಡನು. "ದೇವರೇ ನಿನ್ನ ಲೀಲೆ ಅದ್ಭುತ, ಅದ್ಭುತ" ಎಂದು ಕೈ ಮುಗಿದನು. ಮತ್ತೆ ಮತ್ತೆ, "ದೇವರ ಲೀಲೆ, ದೇವರ ಲೀಲೆ" ಎಂದು ಉದ್ಗರಿಸುತ್ತಿದ್ದನು.

# ಪ್ರಸಂಗ 10

## ರಿಕ್ಕಿ – ಟಿಕ್ಕಿ – ಟಾವಿ

## ಅಂದಿನಿಂದ ನಾಗರ ಹಾವುಗಳ ಹಾವಳಿ ತಪ್ಪಿತು

(ಇದು 10ನೆಯ ಕಾಡಿನ ಕತೆಗಳ ಪ್ರಸಂಗ. ಮೌಗ್ಲಿ ಕತೆಗೆ ನೇರ ಸಂಬಂಧ ವಿಲ್ಲದಿದ್ದರೂ, ಕಾಡಿನಲ್ಲಿ ನಡೆದ ಪ್ರಸಂಗವಾದುದರಿಂದ, ಕಾಡಿನ ಪ್ರಾಣಿಗಳಿಗೆ ಸಂಬಂಧಿತವಾದುದರಿಂದ ಇಲ್ಲಿ ನಿರೂಪಿಸಲಾಗಿದೆ. ಬಿ. ಪಿ. ಅವರ ಪ್ರಕಾರ ಹಿಂಡಿನಲ್ಲಿ ಮರಿಗಳಿಗೆ ನೀಡಬಹುದಾದ ಹೆಸರುಗಳಲ್ಲಿ ರಿಕ್ಕಿ-ಟಿಕ್ಕಿ-ಟಾವಿಯೂ ಒಂದು.)



ಸಿಗೌಲೀ ಬಂಗಲೆಯ ಕೈತೋಟದಲ್ಲಿ ಕಂಡೂ ಕಾಣದಂತೆ ನಾಗರ ಹಾವುಗಳು ವಾಸಿಸುತ್ತಿದ್ದುವು. ರಿಕ್ಕಿ-ಟಿಕ್ಕಿ-ಟಾವಿ ಒಂದು ಬುದ್ಧಿವಂತ, ಶೂರ ಮುಂಗುಸಿ. ಅದಕ್ಕೆ ಡಾರ್ಜೀ ಎಂಬ ಗೀಜುಗನ ಹಕ್ಕಿಯೂ, ಚುಚುಂಡ್ರ ಎಂಬ ಸುಂಡಿಲಿಯೂ ಸ್ನೇಹಿತರು. ರಿಕ್ಕಿಯು ತನ್ನ ಸ್ನೇಹಿತರ ಸಹಾಯದಿಂದ, ಅಲ್ಲಿ ಹಕ್ಕಿಗಳಿಗೂ, ಇಲಿಗಳಿಗೂ ಉಪದ್ರವಕಾರಿಯಾಗಿದ್ದ, ಮನೆಯಲ್ಲಿ ವಾಸವಾಗಿದ್ದ ಟೆಡ್ಡಿ ಮತ್ತು ಅವನ ತಾಯಿ ತಂದೆಯರಿಗೆ ಅಪಾಯಕಾರಿಯಾಗಿದ್ದ ನಾಗರಹಾವುಗಳೊಡನೆ ಸೆಣಸಿ, ವೀರಾವೇಶದಿಂದ ಕಾದಾಡಿ, ಕೊಂದುಹಾಕಿದ ವೀರಗಾಥೆ ಈ ಪ್ರಸಂಗದ ಕಥಾವಸ್ತು.

ರಿಕ್ಕಿಗೆ ಕುಚ್ಚು ಕುಚ್ಚು ಬಾಲ, ತಳಮಳಿಸುವ ಗುಲಾಬಿ ಬಣ್ಣದ ಮೂಗು ಇದ್ದಿತು. ಅದರ ಕಣ್ಣುಗಳೂ ಗುಲಾಬಿ ಬಣ್ಣವೇ. ಆದರೆ ಕೋಪ ಬಂದಾಗ ಮಾತ್ರ ಕೆಂಪಗೆ ಕೋರೈಸುತ್ತಿದ್ದುವು. ಅದು ಬೆಳೆದ ಹುಲ್ಲಿನ ನಡುವೆ ನುಸುಳಿ ಹೋಗುವಾಗ ಮಾತ್ರ ರಿಕ್ಕಿ-ಟಿಕ್-ಟಿಕ್ಕಿ-ಟಿಕ್-ಟಿಕ್ಕಿ ಶಬ್ದಮಾಡುತ್ತಾ ತನ್ನ ಹೆಸರನ್ನು ಅನ್ವರ್ಥ ಮಾಡಿಕೊಂಡಿತ್ತು.

ರಿಕ್ಕಿ ಮರಿಯಾಗಿದ್ದಾಗ, ತನ್ನ ತಾಯಿ ತಂದೆಯರೊಡನೆ, ಕಾಡಿನೊಳಗೆ ಬಿಲದಲ್ಲಿ ಹಾಯಾಗಿ ವಾಸವಾಗಿತ್ತು. ಆದೊಂದು ಕೆಟ್ಟ ಘಳಿಗೆಯಲ್ಲಿ ಪ್ರವಾಹಕ್ಕೆ ಸಿಕ್ಕಿ, ಎಲ್ಲವನ್ನೂ ಕಳೆದುಕೊಂಡು, ರಸ್ತೆ ಬದಿಯಲ್ಲಿರುವ, ಮೋರಿಯಲ್ಲಿ ಸತ್ತಂತೆ ಬಿದ್ದಿತ್ತು. ಟೆಡ್ಡಿ ಎಂಬ ಬಾಲಕನು ಅದನ್ನು ರಕ್ಷಿಸಿ ಸಿಗೌಲಿ ಬಂಗಲೆಗೆ ಕರೆತಂದನು. ಮನೆಯಲ್ಲಿ ಎಲ್ಲರಿಗೂ ಬೇಕಾದವನಾಗಿ, ಹೊಂದಿಕೊಂಡು ರಿಕ್ಕಿ ಮುದ್ದುಮುದ್ದಾಗಿ ಬೆಳೆದನು.

ಊಟದ ವಿಷಯದಲ್ಲಿ ರಿಕ್ಕಿ ಬಹಳ ಹುಷಾರು. ಹೊಟ್ಟೆ ಬಿರಿಯ ತಿಂದರೆ ಜಡತ್ವ ಬಂದುಬಿಡುತ್ತದೆ ಎಂದು, ಎಷ್ಟು ಬೇಕೋ ಅಷ್ಟು, ಅರೆಹೊಟ್ಟೆ ಆದರೂ ಸರಿ, ಎಚ್ಚರದಿಂದಿರುತ್ತಿದ್ದನು. ಮಿತಾಹಾರ ಸೇವನೆಯಿಂದ ಲವಲವಿಕೆಯಿಂದ ಇರುತ್ತಿದ್ದನು.

ಒಂದು ದಿನ ಹಾಗೆಯೇ ಬಂಗಲೆಯ ಕೈತೋಟದಲ್ಲಿ ಅಡ್ಡಾಡುವಾಗ, ಗೀಜಗನ ಹಕ್ಕಿ ಡಾರ್ಜಿಯೊಡನೆ ಗೆಳೆತನ ಬೆಳೆಯಿತು. ಡಾರ್ಜಿಯು ತನ್ನ ಮರಿ ಹಕ್ಕಿಯನ್ನು ನಾಗನು (ಹಾವು) ತಿಂದುಹಾಕಿದ್ದನ್ನು ತಿಳಿಸಿ, ಅತ್ತುಕೊಂಡಿತು. ರಿಕ್ಕಿಯು ಡಾರ್ಜಿಯನ್ನು ಸಂತೈಸಿದನು. ಅದೇ ವೇಳೆ ಅಲ್ಲಿಗೆ ರಕ್ತಸಿಕ್ತನಾಗಿ ಬಂದ ನಾಗನನ್ನು ಕಂಡನು. ಕಂಡ ಕ್ಷಣದಲ್ಲಿ ಹೆದರಿದರೂ, ಧೈರ್ಯ ತಂದುಕೊಂಡು, ನಾಗನನ್ನು ಪ್ರಶ್ನಿಸಿದನು. ನಾಗನಿಗೆ ರೇಗಿತು. ರಿಕ್ಕಿಯನ್ನು ಹೆದರಿಸಿತು. ರಿಕ್ಕಿಯು ಬೆದರದೆ, ನಾಗನನ್ನು ಮತ್ತಷ್ಟು ರೇಗಿಸಿ, ಮೇಲೆ ಬೀಳಲು ಹವಣಿಸಿದನು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ನಾಗಿನಿಯು ಬಂದಿತು. ಅಪಾಯದ ಬಗ್ಗೆ ಡಾರ್ಜಿಯು ಎಚ್ಚರಿಸಿತು. ಕ್ಷಣಮಾತ್ರದಲ್ಲಿ, ರಿಕ್ಕಿಯು ಮೇಲೆ ಹಾರಿ ಪ್ರಾಣಾಪಾಯದಿಂದ ಬಚಾವಾದನು. ತೋಟದ ಕಾಲುದಾರಿಯಲ್ಲಿ ಕುಳಿತು "ಈ ನಾಗಗಳು ಎಂದಿದ್ದರೂ ಅಪಾಯಕಾರಿ. ನಾಗಗಳು ಒಟ್ಟಾಗಿ ಮೇಲೆ ಬಿದ್ದಾಗ, ಪುಟ್ಟ ಮುಂಗುಸಿಗಳು ಬಚಾವಾಗುವುದು ಅಪರೂಪ. ತಾನು ಬದುಕಿದ್ದು, ದೇವರ ದಯೆ" ಎಂದು ಯೋಚಿಸಿದನು. ಆ ವೇಳೆಗೆ ಅಲ್ಲಿಗೆ ಬಂದ ಟೆಡ್ಡಿ, ರಿಕ್ಕಿಯನ್ನು ಎತ್ತಿಕೊಂಡು ಮುದ್ದಾಡಿದನು.

ಅದೊಂದು ದಿನ ರಿಕ್ಕಿಯನ್ನು ಮುದ್ದುಮಾಡಲು ಟೆಡ್ಡಿ ಅದನ್ನು ಎತ್ತಿಕೊಂಡನು. "ಹುಷಾರ್, ನಾನು ಸಾವು ಬಂದಿದ್ದೇನೆ" ಎಂದು ಕರೇಟ್ ಎಂಬ ಕಂದುಬಣ್ಣದ ವಿಷಪೂರಿತ ಹಾವು ಎಚ್ಚರಿಸಿತು. ಕೂಡಲೇ ರಿಕ್ಕಿಯ ಕಣ್ಣುಗಳು ಕೆಂಪೇರಿ

ಕೋರೈಸಿದುವು. ಕರೇಟ್ ಮೇಲೆ ಎರಗಲು ಅಣಿಯಾಯಿತು. ಹೆದರಿದ ಟೆಡ್ಡಿ ಕೂಗಿಕೊಂಡನು. ಟೆಡ್ಡಿಯ ತಾಯಿ ತಂದೆಯರೂ ಕೋಲು ಹಿಡಿದು ಅಲ್ಲಿಗೆ ಬಂದರು. ಆ ವೇಳೆಗೆ ರಿಕ್ಕಿಯು ಕರೇಟ್‌ನ ಕುತ್ತಿಗೆ ಹಿಡಿದು ಅದನ್ನು ನಿಶ್ಶೇಷ್ಟ ಗೊಳಿಸಿತು. ತಾನು ಕರೇಟನನ್ನು ತಿನ್ನುವುದಿಲ್ಲ. ಇನ್ನೂ ಹಸಿವಿನಿಂದಿದ್ದು, ನಾಗ-ನಾಗಿನಿಯರನ್ನು ಎದುರಿಸಿ ಕಾದಬೇಕಲ್ಲವೇ? ಎಂದು ತನಗೆ ತಾನು ಹೇಳಿ ಕೊಂಡು ಹುಷಾರಾಯಿತು.

ಟೆಡ್ಡಿಯ ತಾಯಿ "ನನ್ನ ಮಗನನ್ನು ರಕ್ಷಿಸಿದೆ ರಿಕ್ಕಿ" ಎಂದು ಅದನ್ನು ಮುದ್ದು ಮಾಡಿದರು. ಆ ರಾತ್ರಿ ಮಲಗುವಾಗ, ಟೆಡ್ಡಿಯು, ರಿಕ್ಕಿಯನ್ನು ತನ್ನ ಜೊತೆ ಮಲಗಿಸಿಕೊಂಡನು. ಮಧ್ಯರಾತ್ರಿ ರಿಕ್ಕಿಯು ಮೇಲೆದ್ದು, ಮುನ್ನೆಚ್ಚರಿಕೆ ಕ್ರಮವಾಗಿ ಮನೆಯನ್ನು ಸುತ್ತುಹಾಕಲು ಹೊರಟಿತು. ದಾರಿಯಲ್ಲಿ ಚುಚುಂಡ್ರಾ ಎಂಬ ಮೂಗಿಲಿಯ ಜೊತೆ ಗೆಳೆತನ ಮಾಡಿತು. ಚುಚುಂಡ್ರಾ ತನ್ನ ಸೋದರ ಚುವಾ ಬಗ್ಗೆಯೂ, ನಾಗಗಳ ಬಗ್ಗೆಯೂ ತಿಳಿಸಿತು.

ಒಂದು ಸಾರಿ, ಚುಚುಂಡ್ರಾ ಸಹಾಯದಿಂದ, ಟೆಡ್ಡಿಯ ತಾಯಿಯ ಶೌಚಾಲಯದಲ್ಲಿ ನಾಗಗಳ ಮಾತುಕತೆಯನ್ನು ರಿಕ್ಕಿ ಕೇಳಿಸಿಕೊಂಡಿತು. ಅವು ತನ್ನನ್ನೂ, ಟೆಡ್ಡಿಯನ್ನೂ, ಅವನ ತಾಯಿ ತಂದೆಯರನ್ನೂ ಸಾಯಿಸಲು ಹೊಂಚುಹಾಕುತ್ತಿರುವ ಬಗ್ಗೆ ರಿಕ್ಕಿಗೆ ತಿಳಿಯಿತು.

ಕೂಡಲೇ ರಿಕ್ಕಿ ಹುಷಾರಾದನು. ಸಮಯ ಸಾಧಿಸಿ, ನಾಗನ ಕುತ್ತಿಗೆ ಹಿಡಿದು ಸಾಯಿಸಿದನು. ಆ ಕಾದಾಟದಲ್ಲಿ ಶೌಚಾಲಯದ ವಸ್ತುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದು ಶಬ್ದ ಮಾಡಿದುವು. ಶಬ್ದವನ್ನು ಕೇಳಿ ಅಲ್ಲಿಗೆ ಬಂದ ಟೆಡ್ಡಿಯ ತಂದೆಯು "ಅಲಿಸ್ (ಟೆಡ್ಡಿಯ ತಾಯಿ) ಇಲ್ಲಿ ನೋಡು. ರಿಕ್ಕಿ ನಮ್ಮನ್ನು ಕಾಪಾಡಿದ್ದಾನೆ" ಎಂದು ಹೇಳಿ ರಿಕ್ಕಿಯನ್ನು ಎತ್ತಿ ಮುದ್ದಾಡಿದನು.

ರಿಕ್ಕಿಯು, ಕತೆ ಇಲ್ಲಿಗೆ ಮುಗಿದಿಲ್ಲ. ನಾಗೀನಾ ಬದುಕಿದೆ. ಅದರ 25 ಮೊಟ್ಟೆಗಳು ಮರಿ ಆಗಲಿವೆ, ಎಂದು ಯೋಚಿಸಿ, ಬೆಳಗಾದ ಕೂಡಲೇ ತೋಟಕ್ಕೆ ಓಡಿದನು. ಡಾರ್ಜಿಯನ್ನು ಕಂಡು ನಾಗನನ್ನು ಕೊಂದ ವಿಷಯ ತಿಳಿಸಿ, ನಾಗೀನಾ ಬಗ್ಗೆ ವಿಚಾರಿಸಿದನು. ಡಾರ್ಜಿಯ ಸಂಗಾತಿಯು "ಈ ರಾತ್ರಿ ನಾನು ಟೆಡ್ಡಿಯನ್ನು ಸಾಯಿಸುತ್ತೇನೆ" ಎಂದು ನಾಗಿನಿ ಹೇಳುತ್ತಿತ್ತು ಎಂದು ಹೇಳಿತು. ಕೂಡಲೇ ನಾಗೀನಾ ಇಟ್ಟಿದ್ದ 24 ಮೊಟ್ಟೆಗಳನ್ನೂ ಅವುಗಳಿಂದ ಹೊರಬರಲಿದ್ದ ಮರಿಗಳನ್ನೂ ರಿಕ್ಕಿಯು ನಾಶಪಡಿಸಿದನು. ಉಳಿದೊಂದು ಮೊಟ್ಟೆಯನ್ನು ಬಾಯಲ್ಲಿ ಹಿಡಿದು, ಡಾರ್ಜಿಯ ಸಂಗಾತಿಯ ಕೂಗು ಬಂದ, ಬಂಗಲೆಯ ವರಾಂಡಕ್ಕೆ ರಿಕ್ಕಿ ಓಡಿದನು. ಅಲ್ಲಿ ಟೆಡ್ಡಿ ಮತ್ತು ಅವನ ತಂದೆ ಭಯದಿಂದ ನಡುಗುತ್ತಾ ಉಪಾಹಾರ ಟೇಬಲ್ ಮುಂದೆ ಕುಳಿತಿದ್ದಾರೆ. ನಾಗಿನಿ ಟೆಡ್ಡಿ ಕಾಲಬಳಿ ಹೆಡೆಯೆತ್ತಿದೆ. ಬಾಯಲ್ಲಿದ್ದ ಮೊಟ್ಟೆ ತೋರಿಸಿ

ನಾಗಿನಾ ಗಮನ ಸೆಳೆದು, ನಾಗಿನಿಯನ್ನು ಅಟ್ಟಿಸಿ, ಅದರ ಬಿಲಕ್ಕೂ ನುಗ್ಗಿದನು. ಇನ್ನು ರಿಕ್ಕಿ ಕತೆ ಮುಗಿಯಿತು ಎಂದು ಶೋಕಗೀತೆ, ಚರಮ ಗೀತೆ ಹಾಡುತ್ತಿದ್ದ, ಡಾರ್ಜಿ ದಂಪತಿಗಳು, ಇದ್ದಕ್ಕಿದ್ದಂತೆ ರಕ್ತಸಿಕ್ತವಾಗಿ ವಿಜಯೋತ್ಸಾಹದಿಂದ ಬಿಲದ ಹೊರಗೆ ಬಂದ ರಿಕ್ಕಿಯನ್ನು ಕಂಡು ಹಿಗ್ಗಿದುವು. ನಾಗೀನಾ ಸಾವಿನ ಬಗ್ಗೆ ಎಲ್ಲರಿಗೂ ತಿಳಿಸಿ ಎಂದು ರಿಕ್ಕಿ ಹೇಳಿದನು. ವಿಷಯ ತಿಳಿದ ಎಲ್ಲಾ ಭೂಚರಗಳೂ, ಇಲಿಗಳೂ, ಹಕ್ಕಿಗಳೂ ಸಂಭ್ರಮದಿಂದ ಉಲಿದುವು.

ಆ ರಾತ್ರಿ ರಿಕ್ಕಿಯು ತನ್ನ ಮಾನವ ಕುಟುಂಬದೊಡನೆ ಹೊಟ್ಟೆ ತುಂಬಾ ಊಟ ಮಾಡಿ ಟೆಡ್ಡಿಯ ಭುಜದ ಮೇಲೆ ವಿಶ್ರಮಿಸಿದನು. ರಾತ್ರಿ ಪೂರಾ ಗಡದ್ದು ನಿದ್ರೆ ಮಾಡಿದನು.

ಆ ದಿನ ಮೊದಲು, ಸಿಗೌಲಿ ಬಂಗಲೆಯ ಕೈತೋಟದಲ್ಲಿ ಹಾವುಗಳ ಹಾವಳಿ ತಪ್ಪಿತು. ಹಾಯೆನಿಸಿತು.

## ಅಧ್ಯಾಯ 2

# ಕಬ್ ಮಾಸ್ಟರರಿಗೆ ಅಭಿನಯ ಮಾರ್ಗಸೂಚಿ

ಸೂಚನೆ: i) ಪ್ರತಿ ಅಭಿನಯಕ್ಕೂ ಮುಂಚೆ, ಕಾಡಿನ ಕತೆಗಳ ಹಿನ್ನೆಲೆಯನ್ನು ತಿಳಿಸಬೇಕು. ಮರಿಗಳು ವಹಿಸುವ ಪಾತ್ರ; ಅದರ ಅಂತರಾರ್ಥ, ಪ್ರಾಮುಖ್ಯತೆ ತಿಳಿಸಬೇಕು. ನುಡಿಯಂತೆ ನಡೆದುಕೊಳ್ಳುವ ಬಗ್ಗೆ ವಿವರಿಸಬೇಕು.

ii) ಅಭಿನಯಗಳಲ್ಲಿ ಏಕರೂಪತೆ ಇದ್ದರೆ ಆಕರ್ಷಕವಾಗಿರುತ್ತದೆ, ಸರಿ. ಹಾಗೆಂದು ಹೆಚ್ಚು ನಿಯಮ ನೀತಿ ಹೇರಬಾರದು. ಹಾಗೆ ಮಾಡಿದರೆ ಮಕ್ಕಳ ಚಲನ, ವಲನ, ಭಾವನೆಗಳ ಅಭಿವ್ಯಕ್ತತೆಯಲ್ಲಿ ಸಹಜತೆ ಮಾಯವಾಗಿ, ಯಾಂತ್ರಿಕತೆ ಮತ್ತು ಅಸಹಜತೆ ತೋರುತ್ತದೆ.

iii) ಅಲ್ಪ ಸ್ವಲ್ಪ ವೈವಿಧ್ಯತೆಯು, ಮಕ್ಕಳು ಅಭಿನಯಿಸುವಾಗ ಕಂಡು ಬಂದರೂ, ಸಹಜತೆಯ ಸೌಂದರ್ಯವನ್ನು ಕಂಡು ಮೆಚ್ಚು ವಂತಿರಬೇಕು. ಹಾಗೇನಾದರೂ ಸರಿತಿದ್ದುವುದಾದರೆ ಅಂತಹ ಪ್ರತಿ ಮಗುವನ್ನೂ ಪ್ರತ್ಯೇಕ ಕರೆದು ತಿಳಿಯ ಹೇಳಿ, ಎಲ್ಲರೆದುರಿಗೆ ಕೈ ತೋರಿಸಬೇಡಿ.

iv) ಮಕ್ಕಳಿಗೆ ಹೇಳುವಾಗ ಪುಸ್ತಕ ತೆರೆದಿಟ್ಟುಕೊಂಡು ಓದಿ ಹೇಳಬೇಡಿ. ನಿಮ್ಮ ಹೇಳಿಕೆ ಪ್ರಭಾವಯುತವಾಗುವುದಿಲ್ಲ. ಪುಸ್ತಕದ ಒಕ್ಕಣೆಯನ್ನು ಪೂರಾ ಮನನ ಮಾಡಿಕೊಂಡು, ನಿಮ್ಮ ಅಂತರಾಳದಿಂದ ಹೊರಹೊಮ್ಮುವಂತೆ ವಿವರಿಸಿ.

### ಅಭಿನಯ 1 — ಘನವಂದನೆ



ನಾಥೂ, ಹಿಂಡಿಗೆ ಸೇರಿಕೊಂಡು ಮೌಗ್ಲಿ ಆಗುವ ವರೆಗಿನ ಕತೆಯ ಭಾಗವನ್ನು ವಿವರಿಸಿ. ಅಂತರಾರ್ಥ, ಪ್ರಾಮುಖ್ಯತೆಯನ್ನು ತಿಳಿಸಿ. ಹಿರಿಯರಿಗೆ ಗೌರವ ತೋರುವ ಬಗ್ಗೆ, ವಚನ ಪಾಲನೆಯ ಬಗ್ಗೆ ತಿಳಿಯಹೇಳಿ.

ಕಬ್‌ಮಾಸ್ಟರು ಸಭಾವೇದಿಕೆಯಲ್ಲಿ ನಿಲ್ಲುತ್ತಾರೆ. (Council rock) 'ಪ್ಯಾಕ್' ಎಂದು ಕೂಗಿ ಹೇಳಿ,

ಮರಿಗಳ ಗಮನವನ್ನು ಸೆಳೆಯುತ್ತಾರೆ. ಪುನಃ "ಪ್ಯಾಕ್-ಪ್ಯಾಕ್-ಪ್ಯಾಕ್" ಎಂದು ಕೂಗಿ, ಎಲ್ಲಾ ಮರಿಗಳೂ ಒಟ್ಟಿಗೆ ಸೇರುವಂತೆ ಕರೆಕೊಡುತ್ತಾರೆ. ಈ ಕರೆಗೆ ಉತ್ತರವಾಗಿ ಮರಿಗಳು ಒಕ್ಕೊರಲಿನಿಂದ ಖಚಿತವಾಗಿ, "ಪ್ಯಾಕ್" ಎಂದು ಹೇಳಿ,




ತಮ್ಮ ತಮ್ಮ ಷಟ್ಕಗಳ ಪ್ರಕಾರ, ಕಬ್‌ಮಾಸ್ಟರ ಸುತ್ತಲೂ, ಕಬ್ ಮಾಸ್ಟರ ಎದುರಿಗೆ ಹಿರಿಯ ಆರಾಳಿಯು ಬರುವಂತೆ, ಒತ್ತಾಗಿ ಸೇರುತ್ತಾರೆ (xxx ಸಭಾವೃತ್ತ). ಈಗ ಎಲ್ಲರೂ ಅಕ್ಕಪಕ್ಕದವರ ಕೈಗಳನ್ನು ಹಿಡಿದು, ತೋಳು ಗಳನ್ನು ಹೊರಚಾಚಿ, ಹಿಂದೆ ಸರಿದು, ಆದಷ್ಟು ದೊಡ್ಡ ವೃತ್ತವನ್ನು ಮಾಡುತ್ತಾರೆ. (o-o-o-o-o ಪ್ರದರ್ಶನ ವೃತ್ತ).



ಕಬ್‌ಮಾಸ್ಟರು ವೃತ್ತದ ಮಧ್ಯೆ ಇರುತ್ತಾರೆ. ಅವರು ತಮ್ಮ ಅಂಗೈಗಳನ್ನು ಕೆಳಗೆ ಮಾಡಿ, ತೋಳುಗಳನ್ನು ಹೊರಚಾಚಿದಾಗ ಮರಿಗಳು ಹುಷಾರಾಗುತ್ತಾರೆ. ಕಬ್‌ಮಾಸ್ಟರು ನಿಧಾನವಾಗಿ ಏಕಗತಿಯಲ್ಲಿ ಕೈಗಳನ್ನು ಕೆಳತರುತ್ತಾರೆ. ಅವರ ಕೈಗಳು ಕೆಳಬಂದು ತೊಡೆಗಳನ್ನು ಮುಟ್ಟುತ್ತಿದ್ದಂತೆಯೇ, ಮರಿಗಳು ತಮ್ಮ ಹಿಮ್ಮಡಿಗಳನ್ನು ಮೇಲೆತ್ತಿ, ಕಾಲ್ಬೆರಳುಗಳ ಮೇಲೆ, ಮೊಣಕಾಲುಗಳನ್ನು ದೂರ ಮಾಡಿ, ಕೈಗಳ ಮೊದಲೆರಡು ಬೆರಳುಗಳು ಕಾಲುಗಳ ಮಧ್ಯೆ ನೆಲಮುಟ್ಟುವಂತೆ ಕುಳಿತು ಕೊಳ್ಳುತ್ತಾರೆ. ಮರಿಗಳು ಈ ರೀತಿ ಕೂಡುವ ಚಲನೆಯು ನೇರವಾಗಿರಬೇಕು;

ಕ್ರಮಬದ್ಧವಾಗಿರಬೇಕು. ಯಾವುದೇ ರೀತಿಯ ತೋಳು, ಕೈಕಾಲುಗಳ ಅತಿಶಯ ಚಲನೆಯಿರಬಾರದು.



ಹಿಂಡು ಈ ಸ್ಥಿತಿಗೆ ಕುಳಿತ ಕೂಡಲೇ, ಬೇರೆ ಯಾವ ರೀತಿಯ ಸಂಕೇತವೂ ಇಲ್ಲದೆ, ಘನವಂದನೆ ಈ ರೀತಿ ಪ್ರಾರಂಭವಾಗುತ್ತದೆ.

1. ಮರಿಗಳು ಆ - ಕೇ - ಲ್ಲ
   ಸಾ - ಧ್ವೇ - ವಾ - ದಷ್ಟ್



ಈ ಕೊನೆಯ 'ದಷ್ಟ್' ಹೇಳುತ್ತಿದ್ದಂತೆಯೇ, ಎಲ್ಲರೂ ಚಕ್ಕನೆ ಮೇಲೆದ್ದು ನಿಲ್ಲುತ್ತಾರೆ. ಕೈಗಳು ತಲೆಯ ಎರಡೂ ಕಡೆ ಇರುತ್ತದೆ. ಕೈಗಳ ಮೊದಲೆರಡು ಬೆರಳುಗಳೂ ಒಟ್ಟಾಗಿದ್ದು, ಮೇಲೆ ಚಾಚಿರುತ್ತವೆ.



2. ಹಿರಿಯ ಆರಾಳಿಯು ಈಗ

ನೀವ್ - ಸಾ - ಧೀ - ಸಿ

ಎಂದು ಹೇಳುತ್ತಾನೆ. ಕೊನೆಯ "ಸಿ" ಹೇಳುತ್ತಿದ್ದಂತೆಯೇ, ಎಲ್ಲಾ ಮರಿಗಳೂ ತಮ್ಮ ಎಡಗೈಯನ್ನು ಚುರುಕಾಗಿ ಕೆಳಗೆ ತಂದು, ಬಲಗೈನಿಂದ ವಂದಿಸುವ ಸ್ಥಿತಿಗೆ ಬರುತ್ತಾರೆ. ಈಗ ಎಲ್ಲರೂ ಒಟ್ಟಿಗೆ ನಾವ್ - ಸಾ - ಧೀ - ಪೇ - ವು ಎಂದು ಹೇಳುತ್ತಾರೆ. ಮರಿಗಳು ವಂದಿಸುವ ಸ್ಥಿತಿಗೆ ಬಂದಾಗ ಕಬ್‌ಮಾಸ್ಟರು ಮೂರು ಬೆರಳುಗಳಿಂದ ವಂದಿಸುತ್ತಾರೆ.

3. ಕೊನೆಯ "ವ್ಹು" ಹೇಳುತ್ತಿದ್ದಂತೆಯೇ ಪ್ರತಿ ಮರಿಯೂ ತನ್ನ ಕೈಯನ್ನು ಕೆಳಗೆ ತಂದು "ಸಾವಧಾನ್" ಸ್ಥಿತಿಯಲ್ಲಿ, ಕಬ್‌ಮಾಸ್ಟರ ಆಜ್ಞೆಗಾಗಿ ಕಾಯುತ್ತಾ ನಿಲ್ಲುತ್ತಾನೆ.

4. ಕಬ್‌ಮಾಸ್ಟರು ವಂದನೆಯನ್ನು ಸೂಕ್ತರೀತಿಯಲ್ಲಿ ಸ್ವೀಕರಿಸಿ, 'ಥ್ಯಾಂಕ್ಯೂ' 'ಧನ್ಯವಾದಗಳು', 'ಒಳ್ಳೆಯದಾಯಿತು'. 'ಗುಡ್ ಹಂಟಿಂಗ್' ಇತ್ಯಾದಿ—ಯಾವುದಾದರೊಂದು ಅಭಿನಂದನೆ ಮಾತನ್ನು ಹೇಳುತ್ತಾರೆ.

ಮರಿಗಳ ಘನವಂದನೆಯ ಸಂದರ್ಭದಲ್ಲಿ, ಸಹಾಯಕ ಕಬ್‌ಮಾಸ್ಟರು ವೃತ್ತದ ಹೊರಗೆ, ಕಬ್‌ಮಾಸ್ಟರಿಗೆ ನೇರವಾಗಿ ಹಿಂದೆ, "ಸಾವಧಾನ್"ನಲ್ಲಿ ನಿಂತಿರುತ್ತಾರೆ. ಆದರೆ ಅವರು ವಂದನೆ ಮಾಡುವುದಿಲ್ಲ.

ಮರಿಗಳ ಘನವಂದನೆಯು ಮನಃಪೂರ್ವಕವಾಗಿ, ಶಿಸ್ತಿನಿಂದಿರಲು ಒಪ್ಪಿಕೊಂಡಿರುವುದನ್ನೂ (ಇದರಿಂದಲೇ ಸುಖ ಮತ್ತು ಗೆಲುವುಂಟಾಗುವುದು) ಹಿಂಡು ಮತ್ತು ಅದರ ನಾಯಕತ್ವದ ಬಗ್ಗೆ ನಿಷ್ಠೆಯನ್ನೂ ಒತ್ತಿ ಹೇಳುತ್ತದೆ.

ಮರಿಗಳ ಘನವಂದನೆಯನ್ನು 'ದೀಕ್ಷೆ'ಯನ್ನು ಪಡೆದ ಮರಿಗಳು ಮಾತ್ರ ಮಾಡುತ್ತಾರೆ.

## ಅಭಿನಯ 2 — ಬಾಲೂ ಅಭಿನಯ



i) **"ಬಾಲೂ"**ವು ಭಾರಿ ಆಕಾರದ, ಮೃದು ಸ್ವಭಾವದ ಸೂಕ್ಷ್ಮರೀತಿಯ, ಬುದ್ಧಿವಂತ, ಸಹನಶೀಲ ಮುದಿ ಕರಡಿ. ಎಲ್ಲರೊಡನೆ ಸುಲಭವಾಗಿ ಬೆರೆಯುವ ಪ್ರಾಣಿ.

ii) **ಬಾಲೂವು** ಕಾಡಿನ ನಿಯಮಗಳು ಮತ್ತು ನಡೆವಳಿಕೆಯ ಬಗ್ಗೆ ಮೌಗ್ಲಿಗೆ ಕಲಿಸಿದುದನ್ನು ಕಬ್‌ಮಾಸ್ಟರು ತಿಳಿಸಬೇಕು. ಮರಿಗಳ ನಿಯಮದ ಎರಡು ಸಾಲುಗಳ ಬಗ್ಗೆ ಹೇಳುವಾಗ ನಿಯಮದಲ್ಲಿ ಬರುವ ಮೂರು ಅಂಶಗಳಾದ ವಿಧೇಯತೆ, ನೈರ್ಮಲ್ಯ ಮತ್ತು ವಿನಯಶೀಲತೆಗಳ ಬಗ್ಗೆ ವಿವರಿಸಬೇಕು. ಆ ಅಂಶಗಳ ಗಂಭೀರತೆ, ಪಾಲನೆ ಮತ್ತು ಅವುಗಳ ಬಗ್ಗೆ ಹೆಮ್ಮೆ ಪಡಬೇಕಾದುದನ್ನು ಹೇಳಬೇಕು. ಈಗ ಬಾಲೂ ಅಭಿನಯವನ್ನು ಅಭ್ಯಾಸ ಮಾಡಿಸಬೇಕು. ಈ ಅಭಿನಯದಲ್ಲಿ ಮರಿಗಳೆಲ್ಲರೂ ಕರಡಿಗಳು.

iii) **ಬಾಲೂ ಅಭಿನಯದ ವಿವರ:** ಮರಿಗಳು ಪ್ರದರ್ಶನ ವೃತ್ತದಲ್ಲಿ ನಿಲ್ಲುತ್ತಾರೆ. ಕಬ್‌ಮಾಸ್ಟರು "ಪ್ಯಾಕ್" ಎಂಬ ಆದೇಶವನ್ನು ನೀಡಿದ ಕೂಡಲೇ ಮರಿಗಳು ಬಲಗಡೆಗೆ ತಿರುಗುತ್ತಾರೆ. ಆರಾಳಿಯನ್ನು ಅನುಸರಿಸುತ್ತಾ ಠೀವಿಯಿಂದ, ಮುಂದಕ್ಕೆ ನಡೆಯಬೇಕು. ಪ್ರತಿ ಪದಕ್ಕೆ ಒಂದು ಹೆಜ್ಜೆ. ಪ್ರತಿಪದವನ್ನೂ ಹೆಮ್ಮೆಯಿಂದ, ಎತ್ತರದ ಧ್ವನಿಯಲ್ಲಿ ಹೇಳಬೇಕು. ಎದೆಯನ್ನು ಮುಂದೆ ಚಾಚಿ, ಕೈಗಳನ್ನು ಹಿಂದಕ್ಕೆ ನೀಳವಾಗಿ ಬಿಗಿಸಿ ಹಿಡಿಯಬೇಕು. ಪ್ರತಿಹೆಜ್ಜೆಗೂ ಎದೆಯು ಬಲಕ್ಕೊಮ್ಮೆ ಎಡಕ್ಕೊಮ್ಮೆ ತಿರುಗುತ್ತದೆ. ದೃಷ್ಟಿಯು ನೇರವಾಗಿ, ವಿಶಾಲವಾಗಿರಬೇಕು. ಹೆಮ್ಮೆಯ ಭಾವವು ಮುಖದಲ್ಲಿ ಸ್ಫುಟಗೊಳ್ಳಬೇಕು.





**ಮರಿಯು ವಿಧೇಯನಾಗಿ ಇರುವನು**

**ಮರಿಯು ನಿರ್ಮಲನು ಮತ್ತು ವಿನಯಿ**

ನಿಯಮದ ಎರಡು ಸಾಲುಗಳೂ ಮುಗಿದ ಕೂಡಲೇ ಹಿಂದಕ್ಕೆ ತಿರುಗಬೇಕು. ನಿಯಮದ ಎರಡು ಸಾಲುಗಳನ್ನೂ ಪುನಃ ಹೇಳುತ್ತಾ ಮುಂದುವರೆಯಬೇಕು. ಹೀಗೆ ಎರಡನೆಯ ಬಾರಿ ನಿಯಮದ ಎರಡು ಸಾಲುಗಳು ಮುಗಿದ ಮೇಲೆ ಪುನಃ ಹಿಂದಿರುಗಬೇಕು. ಮತ್ತೆ ನಿಯಮದ ಎರಡು ಸಾಲುಗಳನ್ನು ಹೇಳಬೇಕು. ಹೀಗೆ

ಮೂರನೆಯ ಬಾರಿ ಆದ ಮೇಲೆ ಎಲ್ಲರೂ ತಾವಾಗಿ ವೃತ್ತದ ಒಳಗಡೆಗೆ ತಿರುಗಿ, ಸಾವಧಾನ ಸ್ಥಿತಿಯಲ್ಲಿ ನಿಲ್ಲಬೇಕು. ಈಗ ಅಕೇಲರು "ವಿಶ್ರಾಮ್" ಆದೇಶ ನೀಡಿ, ಎಲ್ಲರೂ ವಿಶ್ರಾಂಗೆ ಬರುತ್ತಾರೆ.

## ಅಭಿನಯ 3 — ಬಘೀರ ಅಭಿನಯ

i) **ಬಘೀರನು** ಕತ್ತಲಿನಲ್ಲೂ ನೋಡಬಲ್ಲ, ಮರಗಳನ್ನೂ ಹತ್ತಬಲ್ಲ, ಮರಸು ಬೇಟೆ ಆಡಬಲ್ಲ ಕರಿಯ ಮುದಿ ಚಿರತೆ. ಬಘೀರನು ಬುದ್ಧಿವಂತ, ಸೂಕ್ಷ್ಮಗ್ರಾಹಿ, ಧೈರ್ಯವಂತ, ಕುಶಲಿ, ಸಮರ್ಥ ಬೇಟೆಗಾರ, ಕಾರ್ಯಚತುರ.



ii) **ಬಘೀರನು** ಬೇಟೆಯ ಇತಿ ಮಿತಿಗಳನ್ನೂ, ರೀತಿನೀತಿಗಳನ್ನೂ ಮೌಗ್ಲಿಗೆ ತಿಳಿಸಿದ ದಕ್ಷ ಗುರು. ಮೌಗ್ಲಿಯು ಹಿಂಡಿಗೆ ಸೇರಲು, ಸತ್ತ ಗೂಳಿಯ ಬೆಲೆತೆತ್ತು ಸಹಾಯ ಮಾಡಿದ ಮಮತಾಮಯಿ. ಈ ಅಭಿನಯದಲ್ಲಿ ಮರಿಗಳೆಲ್ಲರೂ ಚತುರ ಬೇಟೆಗಾರ ಚಿರತೆಗಳು.

iii) **ಬಘೀರ ಅಭಿನಯದ ವಿವರ:** ಹಿಂಡು ಪ್ರದರ್ಶನ ವೃತ್ತದಲ್ಲಿರುತ್ತದೆ. "ಪ್ಯಾಕ್ ಬಘೀರ" ಎಂಬ ಆದೇಶಕ್ಕೆ ಸರಿಯಾಗಿ ಮರಿಗಳು ಬಲಕ್ಕೆ ತಿರುಗುತ್ತಾರೆ. ಸ್ವಲ್ಪ ಮುಂದೆ ಬಾಗಿ, ಎಡಗೈ ಬೆನ್ನು ಹಿಂದೆ ಮುಷ್ಟಿ ಬಿಗಿ ಹಿಡಿದು, ಬಲಗೈನಿಂದ ಕಣ್ಣುಗಳ ಮೇಲೆ ನೆರಳು ಮಾಡಿಕೊಂಡು, ದೃಷ್ಟಿಯನ್ನು ಕೇಂದ್ರೀಕರಿಸಿ, ಎಡದಿಂದ ಬಲಕ್ಕೆ, ಬಲದಿಂದ ಎಡಕ್ಕೆ ದೃಷ್ಟಿ ಹಾಯಿಸುತ್ತ ಬೇಟೆಯನ್ನು ಹುಡುಕುತ್ತಾ ಇರುವಂತೆ ನಾಲ್ಕಾರು ಹೆಜ್ಜೆ ಮುಂದುವರಿಯಬೇಕು. ಕಬ್‌ಮಾಸ್ಟರು ಇದ್ದಕ್ಕಿದ್ದಂತೆ ಬೇಟೆ ವಸ್ತುವನ್ನು ವೃತ್ತದ ಮಧ್ಯೆ ಹಾಕಬೇಕು. ಈಗ ಮರಿಗಳು ಎಡಗೈ ಕದಲಿಸದೆ ಬಲಗೈನಿಂದ ತೋರಿಸುತ್ತಾ, ಮುಖದಲ್ಲಿ ಭಾವನೆ ತೋರಿಸಬೇಕು (ಕಣ್ಣಗಲಿಸುವುದು, ಮೃದು ಮಂದಹಾಸ, ತಲೆ ಹಾಕುವುದು). ಒಂದೆರಡು ಹೆಜ್ಜೆ ಕಳೆದ ಮೇಲೆ

ಬಾಗಿ ನಾಲ್ಕು ಹೆಜ್ಜೆ ಹಾಕಿ ಮೊಣಕಾಲ ಮೇಲೆ ಕೂರಬೇಕು. ಕ್ಷಣಕಾಲ ಮತ್ತಷ್ಟು ಬಾಗಿ, ಎರಡು ಹೆಜ್ಜೆಯಷ್ಟು ಅದೇ ಸ್ಥಿತಿ ಹಿಂದೆ ಮತ್ತೆ ಮುಂದೆ ಬರಬೇಕು. ನಿಶ್ಶಬ್ದವಿರುವಂತೆ, ಬಾಯಿ ಮೇಲೆ ಬೆರಳಿಡಬೇಕು. ಮತ್ತೆ ಅಂಬೆಗಾಲಿನಲ್ಲಿ ಎರಡು ಹೆಜ್ಜೆ ಹಿಂದೆ ಮುಂದೆ ಬರಬೇಕು. ಈಗ ತೆವಳುವ ಸ್ಥಿತಿಗೆ ಬರಬೇಕು. ಈ ಸ್ಥಿತಿಯಲ್ಲಿ ಪೂರಾ ನೀಳ ಸ್ಥಿತಿಯಲ್ಲಿ ಮಲಗಬೇಕು. ದೇಹವು ಮೇಲೇಳದಂತೆ ಒಂದೊಂದೇ ಸೆಂ. ಮೀ. ತೆವಳಿ ಮುಂದು ವರೆಯುತ್ತಾ, ಸಭಾವೃತ್ತ ಮುಟ್ಟಬೇಕು. ಯಾವುದೇ ಕಾರಣಕ್ಕೂ ಬೇಟೆಯು ಬೆದರಿ ಕೈ ತಪ್ಪಿ ಹೋಗದಂತೆ ಬಹಳವಾಗಿ ಎಚ್ಚರ ವಹಿಸಬೇಕು. ಈಗ



ಎಲ್ಲರೂ ಒಬ್ಬರಿಗೊಬ್ಬರು ಅಂಟಿದಂತೆ ನೆಲವೂ, ದೇಹವೂ ಒಂದಾದಂತೆ ಇರುತ್ತಾರೆ. ಕಬ್‌ಮಾಸ್ತರು ಸೂಚನೆ ಕೊಟ್ಟ ಕೂಡಲೇ, ಎಲ್ಲರ ಬಲಗೈ ಗಳೊಟ್ಟಾಗಿ, ಬೇಟೆಯನ್ನು ಅಪ್ಪಳಿಸಿ, "ಹೋ" ಎಂದು ಕೂಗುತ್ತಾ ಮೇಲೆ ಎಗರಬೇಕು.

ಬೇಟೆಯಾಡಲು ಬಲಕ್ಕೆ ತಿರುಗಿ ಪ್ರಾರಂಭ ಮಾಡಿದಾಗಿನಿಂದ, ಬೇಟೆಯನ್ನು ಅಪ್ಪಳಿಸಿ, "ಹೋ" ಎಂದು ಕೂಗುತ್ತಾ ಎಗರುವವರೆಗೆ ಸಂಪೂರ್ಣ ನಿಶ್ಶಬ್ದವನ್ನು (ರುದ್ರಮೌನ ಎಂದು ಕನ್ನಡದಲ್ಲೂ, "ಪಿನ್ ಡ್ರಾಪ್ ಸೈಲೆನ್ಸ್" ಎಂದು ಇಂಗ್ಲಿಷಿನಲ್ಲೂ ಹೇಳುತ್ತಾರೆ) ಪಾಲಿಸಬೇಕು.

ಸೃಜನಶೀಲ ಕಬ್‌ಮಾಸ್ತರು, ಮಧ್ಯೆ ಹಾಕುವ ಬೇಟೆ ವಸ್ತುವನ್ನು ಯಾವುದಾದರೂ ಪುಟ್ಟ ಪ್ರಾಣಿಯ—ಮೊಲ, ಹಕ್ಕಿ ಇತ್ಯಾದಿ ರೂಪದಲ್ಲಿ ಗೊಂಬೆ

ಮಾಡಿ (ಅದರೊಳಗೆ ಮಿಂಟ್ಸ್, ಟಾಫೀ ಇತ್ಯಾದಿ.,) ಇಟ್ಟಿರುವುದಾದರೆ ಬೇಟೆಯು ಮತ್ತಷ್ಟು ಸ್ವಾರಸ್ಯಕರವಾಗಿರುತ್ತದೆ.

ಗಮನಿಸಿ: ಈ ಅಭಿನಯದ ಪ್ರಭಾವ

i) ನಿಶ್ಶಬ್ದವಾಗಿರಲು, ನಿಶ್ಶಬ್ದವಾಗಿ ಚಲಿಸಲು ಮರಿಗಳಿಗೆ ಇದೊಂದು ಅಭ್ಯಾಸ.

ii) ಎಲ್ಲರ ಚಲನವಲನಗಳೂ "ಅಣ್ಣ"(ಹಿರಿಯ ಆರಾಳಿ)ನನ್ನು ಅನುಕರಿಸುತ್ತ ಏಕರೀತಿಯಲ್ಲಿರುವುದರಿಂದ ಸಂವೀಕ್ಷಣೆ, ಸ್ವಜಾಗೃತಿ, ಶಿಸ್ತು, ಸಂಯಮಗಳಲ್ಲಿ ಸಹ ಅಭ್ಯಾಸವಾಗುತ್ತದೆ.

## ಅಭಿನಯ 4 — "ಕಾ" ಅಭಿನಯ

i) **'ಕಾ'** ಅಭಿನಯದ ಹಿನ್ನೆಲೆಯಾಗಿ, ಕಾಡಿನ ಕತೆಗಳಲ್ಲಿ ಬರುವ, ಪ್ರಸಂಗ 2 ನ್ನು ವಿವರಿಸಿ.



ii) **'ಕಾ'** ಸೂಕ್ಷ್ಮಮತಿ, ವಾತ್ಸಲ್ಯಮಯಿಯಾದ ಹೆಬ್ಬಾವು. ಸಾಮಾನ್ಯವಾಗಿ "ತಾನಾಯಿತು" ಎಂಬಂತಿರುವ ಈ ಹಾವು, ಆವಶ್ಯಕತೆ ಬಿದ್ದಾಗ ಮಿತ್ರರಿಗೆ ಸಹಾಯಕನಾಗಿ, ದುಷ್ಟ ಶಿಕ್ಷಕನಾಗಿ ವರ್ತಿಸುವ ಪ್ರಾಣಿಯಾಗಿರುತ್ತದೆ.

iii) **'ಕಾ'** ಆಗತಾನೇ ಪೊರೆ ಬಿಟ್ಟು, ಹಸಿವೆಯಿಂದಿರುವಾಗ, ಬಾಲು ಮತ್ತು ಬಘೀರರು ಸಹಾಯ ಕೋರಿದರು. ಅವರ ಜೊತೆಗೂಡಿ ಹೋಗಿ, ಬಂದರ್ ಲೋಗ್‌ಗಳು ಅಪಹರಿಸಿದ್ದ, ಕಷ್ಟದಲ್ಲಿ ಸಿಕ್ಕಿಕೊಂಡಿದ್ದ ಮೌಗ್ಲಿಯನ್ನು ಪಾರುಮಾಡಿದನು. ಆ ಬಳಿಕ ಅಪಹರಣಕಾರ ಮಂಗಗಳನ್ನು ನುಂಗಿಹಾಕಿ ಶಿಕ್ಷಿಸಿದನು.

iv) **'ಕಾ' ಅಭಿನಯದ ವಿವರ:** ಹಿಂಡು ಪ್ರದರ್ಶನ ವೃತ್ತದಲ್ಲಿರುತ್ತದೆ. ಪ್ಯಾಕ್ "ಕಾ" ಆದೇಶ ಬಂದ ಕೂಡಲೇ ಈ ಅಭಿನಯಕ್ಕಾಗಿ ಮರಿಗಳು ಎತ್ತರಕ್ಕೆ ತಕ್ಕಂತೆ—ಎತ್ತರವಾಗಿರುವವರು ಸಾಲಿನಲ್ಲಿ ಮೊದಲು, ಕುಳ್ಳಗಿರುವವರು ಸಾಲಿನ ಕೊನೆಗೆ ಬರುವಂತೆ—ನಿಲ್ಲಬೇಕು. ಬಳಿಕ ಬಲಕ್ಕೆ ತಿರುಗಬೇಕು. ಎಲ್ಲರಿಗಿಂತ ಎತ್ತರದ ಮರಿ ಅಥವಾ ಅಣ್ಣ (ಹಿರಿಯ ಆರಾಳಿ) ಅಥವಾ

ನಿಗದಿತರಾದವನು ಮೊದಲು ನಿಂತು ಮುಂದೆ ಬಾಗಿ, ನೆಲದ ಕಡೆ ದೃಷ್ಟಿ ಹಾಕಿ, ಕೈಗಳನ್ನು ಕಣ್ಣು ಮಟ್ಟದಲ್ಲಿ ಮುಂಚಾಚಿ ಹಿಡಿದು, ಮಧ್ಯ ಮತ್ತು ತೋರು ಬೆರಳುಗಳನ್ನು ಹಾವಿನ ನಾಲಗೆಯಂತೆ ಆಡಿಸುತ್ತಾ 'ಸ್ ಸ್....' ಶಬ್ದ ಮಾಡುತ್ತಾ ಹೆಜ್ಜೆಗೆ ಅರಹೆಜ್ಜೆ ಹಾಕುತ್ತಾ ನಿಧಾನವಾಗಿ ಮುನ್ನಡೆಯುತ್ತಾನೆ. ಅವನ ಹಿಂದಿನವರು ಅವರ ಮುಂದಿನವರ ಭುಜ ಹಿಡಿದು, ಅವನ ಬೆನ್ನು ಮೇಲೆ ತಲೆ ಒರಗಿಸಿ ಮುಂದೆ ಬಾಗಿ ಯಾವುದೇ ಕಾರಣಕ್ಕೂ ತಲೆ ಮೇಲೆತ್ತದೆ ಹೆಜ್ಜೆ ಹಾಕುತ್ತಾರೆ. ಎಲ್ಲರೂ "ಸ್ ಸ್....' ಶಬ್ದ ಮಾಡುತ್ತಿರಬೇಕು. ನಿಧಾನವಾಗಿ, ಅಂಕುಡೊಂಕಾಗಿ ಮುನ್ನಡೆಯಬೇಕು. ಈಗ ಎಲ್ಲರೂ "ಕಾ" ನ ದೇಹದ ಭಾಗವಾದುದರಿಂದ, ದೇಹವು ಕತ್ತರಿಸಿಹೋಗದಂತೆ, ಒಂದೇ ಇರುವಂತೆ ಎಚ್ಚರಿಕೆ ವಹಿಸಬೇಕು. ಸಣ್ಣ ಸಣ್ಣ ಹೆಜ್ಜೆ ಇಡುವುದು ಮುಖ್ಯ. ಎತ್ತರದವರು ಎಷ್ಟೇ ಸಣ್ಣ ಹೆಜ್ಜೆ ಇಟ್ಟರೂ, ಕೊನೆಕೊನೆಯವರು ದಾಪುಗಾಲುಹಾಕಬೇಕಾಗುತ್ತೆ. ಎಲ್ಲರೂ ಅಭಿನಯವನ್ನು ಗಂಭೀರವಾಗಿ ಎಣಿಸುತ್ತಾ ಭಾಗವಹಿಸಬೇಕು.



ಈ ರೀತಿಯಲ್ಲಿ ಹಾವು ಅಂಕುಡೊಂಕಾಗಿ ಸುತ್ತುತ್ತಾ, ಸುತ್ತಿಕೊಳ್ಳುತ್ತಾ, ಬಿಚ್ಚಿಕೊಳ್ಳುತ್ತಾ ಮುಂದುವರೆಯಬೇಕು.

ಹೀಗಿರುವಾಗ ಕಬ್‌ಮಾಸ್ಟರು, "ಪ್ಯಾಕ್, ಬಂದರ್ ಲೋಗ್" ಆದೇಶ ನೀಡುತ್ತಾರೆ. ಕೂಡಲೇ ತಲೆಯ ಭಾಗಕ್ಕೆ ಇರುವವನು ನಾಲಿಗೆ ಆಡಿಸುತ್ತಾ "ಸ್ ಸ್...." ಶಬ್ದಮಾಡುತ್ತಾ ಎಂದಿನಂತೆ ಮುಂದುವರೆಯಬೇಕು. ಉಳಿದವರೆಲ್ಲರೂ ಮಂಗಗಳಾಗಿಬಿಡುತ್ತಾರೆ. ಅವರುಗಳೆಲ್ಲರೂ, ಕಪಿಚೇಷ್ಟೆ ಮಾಡುತ್ತಾರೆ. ಕುಣಿದು,

ಕೂಗಾಡುತ್ತಾರೆ. ಮೈ ಕೆರೆದುಕೊಳ್ಳುವುದು, ಅಣಕಿಸುವುದು, ಲಾಗ ಹಾಕುವುದು ಹೀಗೇ ಏನೇನೋ, ಒಟ್ಟಿನಲ್ಲಿ ಕಪಿಚೇಷ್ಟೆ ಮಾಡುತ್ತಿರುತ್ತಾರೆ.



ಒಂದೆರಡು ನಿಮಿಷದ ಬಳಿಕ ಕಬ್‌ಮಾಸ್ಟರು "ಪ್ಯಾಕ್ 'ಕಾ' " ಆದೇಶ ನೀಡುತ್ತಾರೆ. ಕೂಡಲೇ ಗಲಾಟೆ ಕಪಿಚೇಷ್ಟೆ ನಿಲ್ಲುತ್ತದೆ. ನಿಶ್ಶಬ್ದ, ಭಯ ಆವರಿಸುತ್ತದೆ. ಕಪಿಗಳು ಕೂತ ಕಡೆ ನಿಶ್ಚೇಷ್ಟಿತ ಆಗುತ್ತವೆ. ಕೈ ಕಾಲು, ಬಾಲ ಮುದುರಿ, ಭಯದಿಂದ ನಡುಗುತ್ತಾ ಕೂಡುತ್ತವೆ. ಈಗ ಕಾ ಒಂದೊಂದೇ ಕಪಿಯನ್ನು ನುಂಗುತ್ತಾ ಹೋಗುತ್ತದೆ. ಎಂದರೆ ಅದು ಭಯವಿಹ್ವಲ ಕಪಿಗಳ ಮಧ್ಯೆ ಅಡ್ಡಾಡುತ್ತಿರುವಾಗ ತಮ್ಮ ಮುಂದಿನವರ ಭುಜ ಹಿಡಿದು, ಅದೇ ಕ್ರಮದಲ್ಲಿ , ಅದೇ ರೀತಿ ಬಲಪಕ್ಕದಿಂದ ಸೇರಿಕೊಂಡು, ಮೊದಲಿನಂತೆ 'ಕಾ'ನ ದೇಹದ ಭಾಗ ವಾಗುತ್ತಾರೆ. "ಕಾ"ಗೆ, ಈಗ ಹೊಟ್ಟೆ ಭಾರ ಇರುವುದರಿಂದ, ಒಳಸುತ್ತುಹಾಕಿ, ಕುಳ್ಳನೆ ಮರಿಯಿಂದ ಕುಳಿತುಕೊಳ್ಳುತ್ತಾ ತಲೆ ಕಡೆ ಕೊನೆಯಲ್ಲಿ ಕೂಡುತ್ತದೆ, ತಲೆ ಅಡ್ಡ ಹಾಕುತ್ತದೆ. ಇಲ್ಲಿಗೆ ಅಭಿನಯವು ಮುಗಿಯಿತು.

"ಪ್ಯಾಕ್, ಪ್ಯಾಕ್, ಪ್ಯಾಕ್" ಕೂಗಿಗೆ, ಹಿಂಡು ಪ್ರದರ್ಶನ ವೃತ್ತಕ್ಕೆ ಬರುತ್ತದೆ.

## ಅಭಿನಯ 5 — ತಬಾಕಿ ಅಭಿನಯ



| | | |
|---|---|---|
| ಷೇರ್‌ಖಾನನ ಡಂಭಾಚಾರ ವರ್ತನೆ | ಭಾಗ 1 : | ವೃತ್ತ ಮಧ್ಯದಲ್ಲಿ ಷೇರ್‌ಖಾನನು "ನಾನೇ ಷೇರ್ ಖಾನ್" "ಕಾಡಿನ ಒಡೆಯ", "ರಾಜಾಧಿರಾಜ" ಎಂದು ಗರ್ವದಿಂದ ಅಟಾಟೋಪದಿಂದ ಆರ್ಭಟಮಾಡುತ್ತಾ, ಘರ್ಜಿಸುತ್ತಾ ಇರುತ್ತಾನೆ. ನರಿಗಳು ಅವನನ್ನು ಸುತ್ತುವರೆದು, ಷೇರ್ ಖಾನನು ಎದುರಾದಾಗ 'ಸಲಾಂ' ಹಾಕುತ್ತಾರೆ. ಆದರೆ ಷೇರ್‌ಖಾನನು, ಅಹಂಕಾರದಿಂದ, ಅವುಗಳನ್ನು ಕಾಲಿನಿಂದ ಒದ್ದಂತೆ ಮಾಡುತ್ತಾನೆ. ನರಿಗಳಾದರೋ, ಹಿಂಬದಿಯಲ್ಲಿ ಅವನನ್ನು ಅಣಕಿಸುತ್ತಿರುತ್ತವೆ. ಸುತ್ತುವಾಗ 'ನರಿ, ನರಿ' ಎಂದು ಹೇಳುವ ರೂಢಿಯಿದೆ. |
| ಮೌಗ್ಲಿಯ ಧೈರ್ಯ ಷೇರ್‌ಖಾನನ ಪುಕ್ಕಲುತನ ಪ್ರದರ್ಶನ | ಭಾಗ 2 : | (ನಿಶ್ಶಬ್ದವಾದ ಅಭಿನಯ)<br>(ಸ್ವಲ್ಪಕಾಲದ ಬಳಿಕ ಕಬ್‌ಮಾಸ್ಟರು ಚಪ್ಪಾಳೆ ಹೊಡೆದು, ಸಂಕೇತ ನೀಡುತ್ತಾರೆ.)<br>ಸಂಕೇತ ಬಂದ ಕೂಡಲೇ ನರಿಗಳು, ಷೇರ್‌ಖಾನನನ್ನು ಬಿಟ್ಟು ಮಾಯವಾಗುತ್ತವೆ. |





ಸ್ವಲ್ಪ ದೂರದಿಂದ ಮೌಗ್ಲಿಯು ಷೇರ್‌ಖಾನನ ಕಡೆ ಕೈ ಬೆರಳು ತೋರಿಸುತ್ತಾ ಠೀವಿಯಿಂದ ಒಂದೊಂದೇ ಹೆಜ್ಜೆಯಿಡುತ್ತಾ ಬರುತ್ತಾನೆ. ಕೆಲಕ್ಷಣಗಳ ಬಳಿಕ ಷೇರ್‌ಖಾನನ ಆರ್ಭಟ ನಿಲ್ಲುತ್ತದೆ. ಮೌಗ್ಲಿಯ ಒಂದೊಂದು ಹೆಜ್ಜೆಗೂ ಷೇರ್‌ಖಾನನು ಕುಗ್ಗುತ್ತಾ ಭಯವಿಹ್ವಲನಾಗುತ್ತಾನೆ. ಮೌಗ್ಲಿಯು ಹತ್ತಿರ ಬರುವುದಕ್ಕೂ, ಷೇರ್‌ಖಾನನು ನೆಲಕಚ್ಚುವುದಕ್ಕೂ ಸರಿಹೋಗುತ್ತದೆ. ಮೌಗ್ಲಿಯ ಕಡೆಯ ಹೆಜ್ಜೆ ಷೇರ್‌ಖಾನನ ಭುಜದ ಮೇಲೆ ಇಟ್ಟಂತೆ ಮಾಡುತ್ತಿದ್ದಂತೆಯೇ, ಅಭಿನಯ ಮುಗಿಯುತ್ತದೆ.



ಕಬ್‌ಮಾಸ್ಟರು ಪ್ಯಾಕ್ ಹೇಳುತ್ತಾರೆ. ಮರಿಗಳು ಸಭಾವೃತ್ತದಲ್ಲಿ ನಿಲ್ಲುತ್ತಾರೆ.



*ಗಮನಿಸಿ: ಈ ಅಭಿನಯದಲ್ಲಿ ನಕಾರಾತ್ಮಕ ಭಾವನೆಗಳು, ಹೀನ ಗುಣಗಳು, ಢಂಬಾಚಾರ, ಹಿಂಬಡಕತನ, ಧೂರ್ತಲಕ್ಷಣ ಇವೇ ಮುಂತಾದ ಸಮಾಜಘಾತುಕ ಗುಣಗಳು ಇರುವುದರಿಂದ ಎಷ್ಟು ಬೇಕೋ ಅಷ್ಟು ಮಾತ್ರ ಮಾಡಿಸುವುದು ಉಚಿತವೆನಿಸುತ್ತದೆ.*

## ಅಭಿನಯ 6 — ಷೇರ್‌ಖಾನನ ಸಾವಿನ ಅಭಿನಯ

ಈ ಅಭಿನಯದಲ್ಲಿ 2 ಭಾಗಗಳಿವೆ. ಇದರ ಹಿನ್ನೆಲೆ ಪ್ರಸಂಗ 3 ರಲ್ಲಿ ನಿರೂಪಿತವಾಗಿದೆ. ಕತೆ ಪೂರಾ ಷೇರ್‌ಖಾನನ ಪಾತ್ರ ಇರುವುದರಿಂದ ಇಲ್ಲಿ ವಿವರಿಸಿರುವುದಿಲ್ಲ.

### ಭಾಗ 1: ಮೌಗ್ಲಿಯು ಷೇರ್‌ಖಾನನನ್ನು ಬೇಟೆ ಆಡುವುದು

ಹಿಂಡು ಪ್ರದರ್ಶನ ವೃತ್ತದಲ್ಲಿರುತ್ತದೆ. ಪ್ಯಾಕ್-ಮೌಗ್ಲಿ ಆದೇಶಕ್ಕೆ ಸರಿಯಾಗಿ ಹಿಂಡಿನ ಎಲ್ಲರೂ ಎಡಕ್ಕೆ ತಿರುಗುತ್ತಾರೆ. ಈ ಕೆಳಗಿನ ಹಾಡು ಹೇಳುತ್ತಾ ಅಭಿನಯಿಸುತ್ತಾರೆ.

**ಮೌಗ್ಲಿಯ ಬೇಟೆ. ಮೌಗ್ಲಿಯ ಬೇಟೆ**
**ಷೇರ್‌ಖಾನನ್ ಕೊಂದ, ಷೇರ್‌ಖಾನನ್ ಕೊಂದ**
**ಚರ್ಮವ ಸುಲಿದಾ, ಚರ್ಮವ ಸುಲಿದಾ**
**ರಹ್! ರಹ್! ರ್‍ಹಾ! ರಹ್! ರಹ್! ರ್‍ಹಾ!**

**ಅಭಿನಯ ವಿವರ:**

i) ಪದಕ್ಕೊಂದು ಹೆಜ್ಜೆ, ಮೊದಲು ಬಲ ಹೆಜ್ಜೆ, ಬಳಿಕ ಎಡ ಹೆಜ್ಜೆ.

ii) ಮೊದಲ ಸಾಲು: ಬೇಟೆಯಾಡುವಂತೆ ಮುಂದಕ್ಕೆ ಬಾಗಿ ಕಣ್ಣು ಹುಬ್ಬಿನ ಮೇಲೆ ಕೈ ಇಟ್ಟುಕೊಂಡು ಬೇಟೆಯನ್ನು ಅರಸುವುದು.



iii) ಎರಡನೆಯ ಸಾಲು: ಎಡಗಾಲು ಮೆಟ್ಟಿ, ಎಡಗೈ ಹಿಡಿದು, ಬಲಗೈನಿಂದಲೇ ಚೂರಿಹಾಕಿ ಇರಿಯಬೇಕು.

iv) ಮೂರನೆಯ ಎರಡು ಸಾಲು: ಎರಡೂ ಕೈಗಳಿಂದ ಇರಿದ ಚರ್ಮದ ಮಧ್ಯಭಾಗ ಹಿಡಿದು, ಎರಡು ಭಾಗ ಮಾಡಿ, ಎಳೆದಂತೆ ಹೊರಗಡೆಗೆ, ಬಲವಂತವಾಗಿ ಸುಲಿಯುವುದು. ಸುಲಿಯುವ ಶಕ್ತಿಯು, ಬಾಯಿಂದ ಹೊರಡುವ ಪದಗಳಲ್ಲಿ ಹೊಮ್ಮಬೇಕು.

v) ನಾಲ್ಕನೆಯ ಸಾಲು: ಒಂಟಿ ಕಾಲ ಮೇಲೆ ನಿಂತು, ಬಲಗೈ ಮೇಲು ಮಾಡಿ, ತೋರ್ಬೆರಳು ಆಕಾಶ ತೋರುತ್ತಾ, ರಹ್ ರಹ್ ರ್‍ಹಾ ಹೇಳುತ್ತಾ, ಬಲಗಡೆ ತಿರುಗುತ್ತಾ ಕುಣಿಯುವುದು. ಎರಡನೆಯ ರಹ್ ರಹ್ ರ್‍ಹಾ ಹೇಳುವಾಗ ಎಡಗಡೆಗೆ ತಿರುಗುತ್ತಾ ಸ್ವಸ್ಥಾನಕ್ಕೆ ಬರುವುದು.

ಇಲ್ಲಿಗೆ ಅಭಿನಯ ಮುಗಿದಂತೆ. ಕೂಡಲೇ ಪ್ರದರ್ಶನ ವೃತ್ತಕ್ಕೆ ಬರುವುದು.

## ಭಾಗ 2: ಷೇರ್‌ಖಾನನ ಸಾವಿನ ಘೋಷಣೆ

i) ಎಲ್ಲರೂ ಪ್ರದರ್ಶನ ವೃತ್ತದಲ್ಲಿ ಒಳಮುಖಮಾಡಿ, ಕಪ್ಪೆಯಂತೆ ಕೂಡುವುದು.



ii) ಕೆಳಗಿನ ನಾಲ್ಕು ಪದಗಳಿಗೆ, ಪದಕ್ಕೊಂದು ಸಣ್ಣ ಹೆಜ್ಜೆಯಂತೆ, ಕುಳಿತಂತೆಯೇ ಕುಪ್ಪಳಿಸಬೇಕು. ನಾಲ್ಕನೆಯ ಕುಪ್ಪಳಕ್ಕೆ ಎಲ್ಲರೂ ಸಭಾವೃತ್ತಕ್ಕೆ ಬಂದಿರಬೇಕು.

1. ಕುಂಟ
2. ಕಪ್ಪೆ ಭಕ್ಷಕ
3. ಸುಟ್ಟ ಕಾಡಿನ ಪ್ರಾಣಿ
4. ಚಿಕ್ಕ ಮಕ್ಕಳ ಬೇಟೆಗಾರ.

iii) ಪ್ರತಿಪದ ಹೇಳುವಾಗಲೂ, ಒಂದರಿಂದ ನಾಲ್ಕಕ್ಕೆ ಧ್ವನಿಯನ್ನು ಎತ್ತರಿಸುತ್ತಾ ಹೋಗಬೇಕು. ಇದು ಕಬ್‌ಮಾಸ್ಟರ/ಅಣ್ಣನ ಭಾಗ.
ಪ್ರತಿ ಪದಕ್ಕೆ ಕುಪ್ಪಳಿಸುವಾಗಲೂ ಮರಿಗಳು "ಹ್ಲೂಂ" ಹೇಳಬೇಕು. ಪದದ ಧ್ವನಿ ಎತ್ತರಿಸಿದಂತೆ, "ಹ್ಲೂಂ" ಧ್ವನಿ ಎತ್ತರಿಸುತ್ತಾ ಹೋಗಬೇಕು.

iv) ನಾಲ್ಕೂ ಪದಗಳು ಮುಗಿದ ಕೂಡಲೇ, ಎಲ್ಲರೂ ಸಭಾವೃತ್ತಕ್ಕೆ ಬಂದು, ಬಳಿಕ ಒಳಮುಖಮಾಡಿ, ಮಂಡಿಯೂರಿ, ಪೃಷ್ಠದ ಮೇಲೆ ಕೂಡಬೇಕು.



ಅ) ಕಬ್‌ಮಾಸ್ಟರು / ಅಣ್ಣ: "ಷೇರ್‌ಖಾನ್ ಸತ್ತ" ಎಂದು, ಗಂಭೀರವಾದ ಧ್ವನಿಯಲ್ಲಿ, ಮೇಲೆತ್ತಿದ್ದ ಕೈಗಳನ್ನು ನಿಧಾನವಾಗಿ ಕೆಳಗೆ ತರುತ್ತಾ ಹೇಳಬೇಕು. ಕೈ ಮಂಡಿಭಾಗಕ್ಕೆ ಬರುತ್ತಿದ್ದಂತೆ 'ಫಟ್' ಶಬ್ದ ಬರುವ ಹಾಗೆ ಅಪ್ಪಳಿಸಬೇಕು.

ಆ) ಉಳಿದ ಎಲ್ಲರೂ, ಅದೇ ರೀತಿ ಮೇಲೆತ್ತಿದ್ದ ತಮ್ಮ ಕೈಗಳನ್ನು ಹಠಾತ್ ಕೆಳಕ್ಕೆ ತರುತ್ತಾ, ಮಂಡಿಯ ಮೇಲೆ ಅಪ್ಪಳಿಸುತ್ತಾ, "ಸತ್ತ" ಎಂಬ ಪದವನ್ನು 3 ಬಾರಿ ಎತ್ತರದ ಧ್ವನಿಯಲ್ಲಿ ಅಪ್ಪಳಿಸುತ್ತಾ, 3 ನೆಯ ಬಾರಿ "ಸತ್ತ"ಪದ ಮುಗಿಯುತ್ತಿದ್ದಂತೆ, ಛಂಗನೆ ಮೇಲೆ ಹಾರಿ, "ಹೋ" ಎಂದು ಕೂಗಬೇಕು; ಗುಂಡಿನೇಟು ಬಿದ್ದು ಕೆಳಕ್ಕೆ ಕುಸಿದು ಬಿದ್ದಂತೆ, ನೆಲದ ಮೇಲೆ ಒರಗಿ, ನಿಶ್ಚೇಷ್ಟಿತ ಅಲುಗಾಡದೆ ಬಿದ್ದಿರಬೇಕು. ಕಬ್‌ಮಾಸ್ಟರಿಂದ "ಪ್ಯಾಕ್" ಆದೇಶವು ಕೇಳಿ ಬಂದಂತೆ, ಛಂಗನೆ ಮೇಲೆ ಹಾರಿ ಸಭಾವೃತ್ತದಲ್ಲಿ ನಿಲ್ಲಬೇಕು.

ಗಮನಿಸಿ : ಅಭಿನಯದ ಪ್ರದೇಶದಲ್ಲಿ ಕಲ್ಲು, ಮುಳ್ಳುಗಳನ್ನು ತೆಗೆದುಹಾಕಿ ಸ್ಥಳವನ್ನು ಸ್ವಚ್ಛಗೊಳಿಸಿರಬೇಕು. ಹಳ್ಳಗಳಿದ್ದರೆ ಮುಚ್ಚಿ ಸಮ ಮಾಡಿರಬೇಕು. ಅಭಿನಯದ ಭರದಲ್ಲಿ ತಲೆಗೆ ಏಟು ಬೀಳದಂತೆ ಎಚ್ಚರ ವಹಿಸಬೇಕು.

## ಅಧ್ಯಾಯ 3

# ಕತೆಯಲ್ಲಿ ಬರುವ
# ಪ್ರಾಣಿ–ಮಾನವ ಪಾತ್ರಗಳ ಪರಿಚಯ

## 1. ಮೌಗ್ಲಿ ಕತೆಯಲ್ಲಿ

### 1. ಸ್ಥಳ ಪರಿಚಯ

i) "ಸಿಯೋನೀ" – ಕತೆಗಳು ನಡೆದ, ಮಧ್ಯಭಾರತದ ಅರಣ್ಯ ಪ್ರದೇಶ.

ii) ಕಾನೇವಾಡ – ಮೌಗ್ಲಿಯ ಹುಟ್ಟೂರು.

iii) ಉದಯಪುರ – ಹಾಳು ಅರಮನೆಯ ಶೀತಗೃಹ ಪ್ರದೇಶ

iv) ವೇಣುಗಂಗಾ – ಸಿಯೋನೀ ಕಾಡಿನಲ್ಲಿ ಹರಿಯುವ ಮುಖ್ಯ ನದಿ.

v) ಕನ್ಯಾ – ಅರಣ್ಯಾಧಿಕಾರಿ ಗಿಸ್ಬರ್ನ್ ಅವರು ವಾಸಿಸುತ್ತಿದ್ದ ಬಂಗಲೆಯ ಸಮೀಪ ಹರಿಯುವ ತೊರೆ.

vi) ಡೆಕ್ಕನ್ – ವಿಂಧ್ಯಪರ್ವತಗಳ ದಕ್ಷಿಣ ಭಾಗ.

### 2. ಪಾತ್ರ ಪರಿಚಯ

1. ಅಕೇಲ – ತೋಳಗಳ ಹಿಂಡಿನ ನಾಯಕ.
2. ಅಬ್ದುಲ್-ಗಫೂರ್ – ಅರಣ್ಯಾಧಿಕಾರಿ ಗಿಸ್ಬರ್ನ್ ಅವರ ಬಟ್ಲರ್ (ಅಡಿಗೆ ಪರಿಚಾರಕ)
3. ಒಂಟೆಲ್ಲಾ – ರಕ್ತಸಿಕ್ತವಾಗಿ ಓಡಿ ಬಂದ "ಒಂಟಿ ತೋಳ".
4. ಜಕಾಲ – ಮೊಸಳೆ.
5. ಕನ್ಯಾ – ಬಟ್ಲರನ ಮಗಳಿಗೆ ಈ ನಿರೂಪಣೆಯಲ್ಲಿ ನಾವು ಕರೆದ ಹೆಸರು. ಮೌಗ್ಲಿಯ ಪತ್ನಿ. ಮೌಗ್ಲಿಯ ಮಗುವಿನ ತಾಯಿ.
6. 'ಕಾ' – ಮೌಗ್ಲಿಯನ್ನು ಶೀತಗೃಹದ ನೆಲಮಾಳಿಗೆಯಿಂದ ರಕ್ಷಿಸಿದ ಹೆಬ್ಬಾವು.

7. ಗಿಸ್ಬರ್ನ್ – ಅಂತಸ್ಸತ್ವವನ್ನು ಗುರುತಿಸಿ, ಆದರಿಸಿ, ಮೌಗ್ಲಿಯ ಜೀವನಕ್ಕೆ ಆಸರೆ ಕಲ್ಪಿಸಿದ ಅರಣ್ಯಾಧಿಕಾರಿ.

8. ಚೀಲ್ – ಮೌಗ್ಲಿಯನ್ನು ರಕ್ಷಿಸಲು, ಬಾಲು-ಬಘೀರರಿಗೆ ವಾರ್ತೆಯನ್ನು ಕೊಟ್ಟ ಆಪದ್ಬಾಂಧವ ಹದ್ದು.

9. ತಬಾಕಿ – ಚಾಡಿಕೋರ, ಎಂಜಲು ನರಿ.

10. ಥಾ – ಆದಿಕಾಲದ ಗಜರಾಜ

11. ತೋಳರಾಯ – ತೋಳಗವಿಯ ಯಜಮಾನ–ತಂದೆ ತೋಳ.

12. ಢೋಲ್‌ಗಳು – ಕೆಂಪುನಾಯಿ(ಕೆನ್ನಾಯಿ)ಗಳು–ಡೆಕ್ಕನ್ ಸೀಳುನಾಯಿಗಳ ಗುಂಪು.

13. ಪೂರ್ಣದಾಸ – ಕುಂಟು ಹಾಗೂ ಲೋಭಿ ವ್ಯಕ್ತಿ, ಬಲದೇವನ ಮಾತಿಗೆ ತಾಳ ಹಾಕುವವನು.

14. ಫೆಯೋನಾ – ಫೆಯೋವಾನ ತಂದೆ

15. ಫೆಯೋವಾ – ತೋಳಗಳ ಗುಂಪಿನ ನಾಯಕ. (ಅಕೇಲನ ಬಳಿಕ ಆಯ್ಕೆ ಆದವನು).

16. ಬಘೀರ – ಸ್ವಾವಲಂಬಿ ಜೀವನ ನಡೆಸಲೂ, ಬೇಟೆ ಆಡಲೂ ಮೌಗ್ಲಿಗೆ ಕಲಿಸಿದ ಗುರು; ಮನುಷ್ಯರ ರೀತಿನೀತಿಗಳನ್ನು ಮೌಗ್ಲಿಗೆ ತಿಳಿಸಿದ ಗೆಳೆಯ; ಮೌಗ್ಲಿಯು ತೋಳಗಳ ಗುಂಪಿನಲ್ಲಿ ಸೇರಲು ಗೂಳಿಯ ಬೆಲೆ ತೆತ್ತು ಸಂರಕ್ಷಕ ಆದ ಕರಿಯ ಮುದಿ ಚಿರತೆ.

17. ಬಲದೇವ – ಊರಿನ ಬಂದೂಕಧಾರಿ ಬೇಟೆಗಾರ; ನಿಜದಲ್ಲಿ ಹೆದರಿಕೆ ಸ್ವಭಾವದವ; ಬಡಾಯಿ ಕೊಚ್ಚುವ ಬೊಗಳೆ ರಾಯ.

18. ಬಂದರ್ ಲೋಗ್– ಕಪಿಗಳ ಗುಂಪು.

19. ಬಾಲು – ಮೌಗ್ಲಿಯು ತೋಳಗಳ ಗುಂಪಿಗೆ ಸೇರಲು ಮೊದಲ ಕಾರಣನೂ; ಅವನಿಗೆ ನೀತಿ, ನಿಯಮ, ನಡೆವಳಿಕೆ ಬಗ್ಗೆ ಬುದ್ಧಿ ಹೇಳಿ ಕಲಿಸಿದ ಗುರುವೂ ಆದ ಮುದಿ ಕರಡಿ.

20. ಬಿಕ್ಕೈ – ಡೆಕ್ಕನ್ ಪ್ರದೇಶದ ಕುರುಡು ಇಲಿಗಳ ಗುಂಪು.

| | | |
|---|---|---|
| 21. | ಬೂದಣ್ಣಗಳು | – ನಾಥೂ, ತೋಳಗಳ ಗವಿ ಸೇರಿದಾಗಿನಿಂದ ಹಿಡಿದು, ಜೊತೆಯಲ್ಲೇ ಬೆಳೆದು ತಮ್ಮ ಕಡೆಗಾಲದವರೆಗೂ, ಮೌಗ್ಲಿಯ ಜೊತೆಯಲ್ಲೇ ಇದ್ದ ತೋಳದ ಮರಿಗಳು. |
| 22. | ಭಟ್ಟರು | – ಊರಿನಲ್ಲಿ ಶಾಸ್ತ್ರ ಹೇಳುವ, ದೇವರ ಪೂಜೆ ಮಾಡುವ ವ್ಯಕ್ತಿ. |
| 23. | ಮಾಂಗ್ | – ಬಾವುಲಿ |
| 24. | ಮುಲ್ಲರ್ | – ಭಾರತಸರ್ಕಾರದ ಅತ್ಯುನ್ನತ ಅರಣ್ಯಾಧಿಕಾರಿ. |
| 25. | ಮೆಸ್ಸವ್ವ | – ನಾಥೂ (ಮೌಗ್ಲಿಯ) ಹೆತ್ತ ತಾಯಿ |
| 26. | ಮೋರ್ | – ನವಿಲು |
| 27. | ಮೌಗ್ಲಿ | – ಕಥಾನಾಯಕ; ತೋಳಗಳ ಸಾಕುಮಗು; ಮೆಸ್ಸವ್ವಳ ಮಗು ನಾಥೂ. |
| 28. | ರಕ್ಷಾ | – ದಿಟ್ಟ ಮಗು ನಾಥೂವನ್ನು ಮೆಚ್ಚಿ, ತನ್ನ ಗವಿಗೆ ಸೇರಿಸಿಕೊಳ್ಳಲು ಹಠ ಹಿಡಿದ ತಾಯಿ ತೋಳ. |
| 29. | ರಾಮ | – ಮೌಗ್ಲಿ ದನ ಕಾಯುವಾಗ, ಸವಾರಿ ಮಾಡುತ್ತಿದ್ದ, ದಷ್ಟ ಪುಷ್ಟ ಬಲಶಾಲಿ ಕೋಣ. |
| 30. | ಲಾಹಿಣಿ | – ಹೆಣ್ಣು ತೋಳ. |
| 31. | ಶ್ವೇತ ಫಣಿ (ಬಿಳಿನಾಗರ whitehood) | – ಶೀತಗೃಹದ ನೆಲಮಾಳಿಗೆಯಲ್ಲಿ, ಗತಕಾಲದ ರಾಜರುಗಳ ಐಶ್ವರ್ಯ, ಸಂಪತ್ತುಗಳಿಗೆ ಕಾವಲಿದ್ದ ಕೃಷ್ಣಸರ್ಪ. |
| 32. | ಷೇರ್‌ಖಾನ್ | – ನೋಡಲು ಭಯಂಕರನಾದ, ಸ್ವಭಾವತಃ ಹೆದರಿಕೆ ಸ್ವಭಾವದ ಹುಲಿರಾಯ. |
| 33. | ಸಾಹಿ (ಇಕ್ಕಿ) | – ಮುಳ್ಳುಹಂದಿ |
| 34. | ಸಾಂಭೂರ್ | – ಕಡವೆ, ದೊಡ್ಡ ಜಿಂಕೆ |
| 35. | ಹಾಥಿ | – ಮೌಗ್ಲಿಗೆ ಸಹಾಯಕನಾದ ಗಜರಾಜ. |

# 2. ರಿಕ್ಕಿ ಟಿಕ್ಕಿ ಟಾವಿ ಪ್ರಸಂಗದಲ್ಲಿ ಬರುವ ಸ್ಥಳ ಮತ್ತು ಪಾತ್ರಗಳು

**ಸ್ಥಳ : ಕಾಡಿನಲ್ಲಿ ಸಿಗೌಲಿ ಬಂಗಲೆ ಮತ್ತು ಕೈತೋಟ**

**ಪಾತ್ರಗಳು :**

36. ರಿಕ್ಕಿ-ಟಿಕ್ಕಿ-ಟಾವಿ – ಬಹಳ ಚುರುಕಾದ, ಲವಲವಿಕೆಯುಳ್ಳ ನಿಷ್ಠಾವಂತ ಮುಂಗುಸಿ.
37. ಅಲಿಸ್ – ಮನೆಯೊಡತಿ
38. ಟೆಡ್ಡಿ – ಮನೆಯ ಬಾಲಕ
39. ಯಜಮಾನ – ಟೆಡ್ಡಿಯ ತಂದೆ.
40. ಡಾರ್ಜಿ – ಗೀಜುಗನ ಹಕ್ಕಿ
41. ಚುಚುಂಡ್ರ – ಮೂಗಿಲಿ.
42. ನಾಗ – ಗಂಡು ನಾಗರಹಾವು
43. ನಾಗಿನಿ – ಹೆಣ್ಣು ನಾಗರಹಾವು
44. ಕರೇಟ್ – ಕಂದು ಬಣ್ಣದ ವಿಷದ ಹಾವು.
45. ಚುವಾ – ಚುಚುಂಡ್ರಾ ಸೋದರ.

# ಮೂಲ ಕತೆಗಾರನ ಪರಿಚಯ

"ಜಂಗಲ್ ಬುಕ್" ಪುಸ್ತಕದ ಲೇಖಕರಾದ

## ಸರ್ ರಡ್ಯಾರ್ಡ್ ಕಿಪ್ಲಿಂಗ್

ಅವರ ಜೀವನದ ಸ್ಥೂಲ ಪರಿಚಯ

**ಜನನ : 10-12-1865 ಮರಣ : 18-1-1936**



ಭಾರತದ ಮುಂಬೈ ನಗರದ ಡಾ॥ ದಾದಾಭಾಯಿ ನವರೋಜಿ ರಸ್ತೆಯಲ್ಲಿ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್ (ಡೀಮ್ಡ್ ಯೂನಿವರ್ಸಿಟಿ) ಇದೆ. ಅದರ ಇಂದಿನ ಡೀನ್ ಅವರ ಬಂಗಲೆಯಲ್ಲಿ, ಈಗ್ಗೆ 150 ವರ್ಷಗಳಿಗೂ ಹಿಂದೆ ಸರ್ ಜಾನ್ ಲಾಕ್‌ವುಡ್ ಕಿಪ್ಲಿಂಗ್ ಮತ್ತು ಶ್ರೀಮತಿ ಆಲಿಸ್ ಕಿಪ್ಲಿಂಗ್ ದಂಪತಿಗಳು ವಾಸವಾಗಿದ್ದರು. ಅವರಿಗೆ 10-12-1865 ರಂದು ಹುಟ್ಟಿದ ಮಗುವಿಗೆ ಜೋಸೆಫ್ ರಡ್ಯಾರ್ಡ್ ಎಂದು ನಾಮಕರಣ ಮಾಡಿದರು. (ಇಂಗ್ಲೆಂಡ್‌ನ ಸ್ಟಾಫರ್ಡ್‌ಷೈರ್ ಬಳಿಯ ರಡ್ಯಾರ್ಡ್ ಮತ್ತು ಆ ಊರಿನ ಕೆರೆಯ ಪರಿಸರವು ಅವರು ಪ್ರಣಯ ವಾಡಿದ ಪ್ರದೇಶ.)

ಭಾವಜೀವಿ ಬಾಲಕ ರಡ್ಯಾರ್ಡ್ ಬಜ಼ಾರ್‌ಗಳ ಅಂಗಡಿ ಮುಂಗಟ್ಟುಗಳೆದುರು ಅಡ್ಡಾಡುವುದನ್ನು ಹವ್ಯಾಸ ಮಾಡಿಕೊಂಡಿದ್ದನು. ಜನರೊಡನೆ ಸುಲಭವಾಗಿ ಬೆರೆಯುತ್ತಿದ್ದನು. ಹಿಂದಿ ಮಾತನಾಡಬಲ್ಲವನಾಗಿದ್ದನು. ಅವರಿಂದ ಕೇಳಿಸಿಕೊಂಡ ಕತೆಗಳನ್ನು, ವಿಶೇಷವಾಗಿ ತೋಳಗಳು ಮನುಷ್ಯರ ಮಗುವನ್ನು ಸಾಕಿಕೊಳ್ಳುವ ಕತೆಗಳನ್ನು, ಟಿಪ್ಪಣಿ ಮಾಡಿಕೊಳ್ಳುತ್ತಿದ್ದನು. ರಜಾ ದಿನಗಳಲ್ಲಿ ಸಿಮ್ಲಾ ಮುಂತಾದ ಗಿರಿಧಾಮಗಳಿಗೆ ಭೇಟಿ ನೀಡಿದಾಗಲಂತೂ, ಈ ರೀತಿ ಕತೆಗಳನ್ನು ಕೇಳಿಸಿಕೊಳ್ಳುವ, ಟಿಪ್ಪಣಿ ಮಾಡಿಕೊಳ್ಳುವ, ಪ್ರಕೃತಿ ಸಂಚಾರ ಮತ್ತು ಅಧ್ಯಯನ ಮಾಡುವ ಅವಕಾಶಗಳು ವಿಪುಲವಾಗಿರುತ್ತಿದ್ದುವು.

ತಾಯಿಯ ಒತ್ತಡಕ್ಕೆ ಮಣಿದು 6ನೆಯ ವಯಸ್ಸಿಗೇ ಓದುವುದಕ್ಕಾಗಿ ಇಂಗ್ಲೆಂಡ್ ತೆರಳಿದನು. ಅಲ್ಲಿ ಮೊದಲ ಐದು ವರ್ಷಗಳು ಬಹಳ ಹೀನಾಯ ಸ್ಥಿತಿಯಲ್ಲಿದ್ದು, ಓದು ಮುಂದೆ ಸಾಗದೆ, ಆರೋಗ್ಯವೂ ಹದಗೆಟ್ಟಿತು. ಆಗ ಅವನ ತಾಯಿಯವರು ಇಂಗ್ಲೆಂಡ್‌ಗೆ ಹೋಗಿ ವಾಸ್ತವ್ಯ, ವಾತಾವರಣಗಳನ್ನು ಬದಲಿಸಿದರು. ಓದು ಮುಂದುವರೆದಂತೆ ಅವನ ಬರೆಯುವ ಹವ್ಯಾಸವೂ ಮುಂದುವರೆಯಿತು. ಅವನು ಡೀವಾನ್‌ನ ವೆಸ್ಟ್‌ವರ್ಡ್‌ಹೋ ಶಾಲೆಯಲ್ಲಿ ಓದುತ್ತಿರುವಾಗ, ತನ್ನ 13ನೇ ವಯಸ್ಸಿಗೇ (1878) "ಸ್ಕೂಲ್ ಬಾಯ್ ಸ್ಟೋರೀಸ್" ಎಂಬ ಕಥಾ ಸಂಕಲನವನ್ನು ಬರೆದನು.

ಓದುವಾಗ ಪರಿಚಯವಾಗಿ, ಪ್ರಣಯಕ್ಕೂ ತಿರುಗಿ, ವಿವಾಹದಲ್ಲಿ ಕೊನೆಯಾದದ್ದು, "ಬ್ಯಾಲಸ್ಟೀಸ್" ಮನೆತನದೊಡಗಿನ ಗೆಳೆತನ. ಬ್ಯಾಲಸ್ಟೀಸ್ ಅವರ ಸೋದರಿ ಕೆರೋಲೀನ್–ಕ್ಯಾರಿ ಅವರನ್ನು 1892 ರಲ್ಲಿ ವಿವಾಹವಾದರು. ಅದೇ ವರ್ಷ ಅವರ ಮೊದಲ ಮಗು "ಜೋಸೆಫೀನ್" ಹುಟ್ಟಿತು. ಆ ಮಗುವನ್ನು ಮುದಗೊಳಿಸಲು, ಹೆಣೆದು ಹೇಳುತ್ತಿದ್ದ, ಕತೆಗಳ ಸಂಕಲನವೇ "ಜಸ್ಟ್ ಸೋ" ಕತೆಗಳು.

ಮುಂದೆ ಪ್ರೌಢ ರಡ್ಯಾರ್ಡ್ ಅವರು ಪ್ರಖ್ಯಾತರಾದದ್ದು ತಮ್ಮ ಬರಹ ಗಳಿಂದಲೇ. 1894 ರಲ್ಲಿ ಅವರು ಬರೆದು ಪ್ರಕಟಿಸಿದ "ಜಂಗಲ್ ಬುಕ್" ಕತೆಗಳ ಸಂಕಲನವು, ಜನಾದರಣೀಯವಾದುದಷ್ಟೇ ಅಲ್ಲದೆ, ಮುಂದೆ, ಸ್ಕೌಟಿಂಗ್‌ನ ಮರಿಗಳ ವಿಭಾಗದ ಶಿಕ್ಷಣಕ್ಕೆ ಮೂಲಾಧಾರವಾಯಿತು.

ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರು ಬರೆದ ಕತೆ, ಕವನ, ಕಾದಂಬರಿಗಳು ಲೆಕ್ಕವಿಲ್ಲದಷ್ಟು. ಅವರ ಸಾಹಿತ್ಯಕ್ಷೇತ್ರದ ಕೊಡುಗೆಗಳು ವಿಶ್ವವ್ಯಾಪ್ತವಾಗಿ, ಜನಪ್ರಿಯ ವಾಗಿ, ಅಮೂಲ್ಯವಾಗಿ, ಅದಮ್ಯ ರೀತಿಯಲ್ಲಿ ಹರಡಿತು.

ಅವರ ಬಾಲ್ಯದ **ಸಂಕಲನ** "ಸ್ಕೂಲ್ ಬಾಯ್ ಸ್ಟೋರೀಸ್": ಮುದ್ದು ಮಗಳಿಗಾಗಿ ಹೆಣೆದ "ಜಸ್ಟ್ ಸೋ ಸ್ಟೋರೀಸ್" ಸಂಕಲನ; "ಜಂಗಲ್ ಬುಕ್"; **ಕವನಗಳಲ್ಲಿ** "ಇಫ್" ಮತ್ತು **ದೀರ್ಘ ಕವನ** "ಮಾಂಡಲೇ" ಹೆಸರಿಸಲೇಬೇಕು. ಹಾಗೆಯೇ ಇತರ ರಚನೆಗಳಲ್ಲಿ ಪ್ರಮುಖವಾದದ್ದು:

**ಕತೆಗಳು:** ಮ್ಯಾನ್ ಹೂ ವುಡ್ ಬೀ ಕಿಂಗ್, ಟೇಲ್ಸ್ ಆಫ್ ದಿ ಹಿಲ್ಸ್, ಸೋಲ್ಜರ್ಸ್ ತ್ರಿ, ಗಾಡ್ಸ್ ಬಿ, ಇನ್ ಬ್ಲ್ಯಾಕ್ ಅಂಡ್ ವೈಟ್, ಅಂಡರ್ ದೇವದಾರ್ಸ್, ವೀ ವಿಲ್ಲಿ ವಿಂಕಿ, ಸೀ ಟು ಸೀ ಅಂಡ್ ಅದರ್ ಸ್ಕೆಚಸ್, ಲೆಟರ್ಸ್ ಆಫ್ ಟ್ರಾವೆಲ್‌ಗಳನ್ನೂ;

**ಕವನಗಳಲ್ಲಿ:** ಗಂಗಾದಿನ್, ವೈಟ್ ಮ್ಯಾನ್ಸ್ ಬರ್ಡನ್, ಗಾಡ್ಸ್ ಆಫ್ ದಿ ಕಾಪಿ ಬುಕ್ ಹೆಡಿಂಗ್ಸ್‌ಗಳನ್ನೂ;

ಕಾದಂಬರಿಗಳು: 'ನೌಲಖಾ' ಹಾಗೂ 'ಲೈಟ್ ದಟ್ ಫೆಯ್‌ಲ್ಡ್'ಗಳನ್ನು ಉಲ್ಲೇಖಿಸಲೇಬೇಕು, ಓದಲೇಬೇಕು.

ಅವರ ಸಾಹಿತ್ಯ ಕೃಷಿಗೆ ಮನ್ನಣೆ ದೊರೆತು 1907 ರಲ್ಲಿ "ನೊಬೆಲ್ ಪೀಸ್ ಪ್ರೈಜ್ ಫಾರ್ ಲಿಟರೇಚರ್" ಪ್ರಶಸ್ತಿಗೆ ಭಾಜನರಾದರು. ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರು ನೊಬೆಲ್ ಪ್ರಶಸ್ತಿ ಪಡೆದ ಇಂಗ್ಲಿಷ್ ಜನರಲ್ಲಿ ಮೊದಲಿಗರು. ಅದೇ ವೇಳೆ ಅವರಿಗೆ "ಲಾರ್ಡ್" ಪದವಿ ದೊರಕಿದುದೂ, "ಪೊಯೆಟ್ ಲಾರೆಟ್ ಆಫ್ ಇಂಗ್ಲೆಂಡ್" ಗೌರವ ದೊರಕಿದುದೂ ಉಲ್ಲೇಖನೀಯ.

ಕಿಪ್ಲಿಂಗ್ ಅವರು, ಅವಿಭಾಜಿತ ಭಾರತದಲ್ಲಿ 5 ವರ್ಷ ಕಾಲ (1882-87) ಲಾಹೋರ್‌ನಲ್ಲಿ ವಾರ್ತಾ ಪತ್ರಿಕೆಯ ಸಹಾಯಕ ಸಂಪಾದಕರಾಗಿದ್ದರು. ಮುಂದೆ 1887-88 ರಲ್ಲಿ ಉತ್ತರ ಪ್ರದೇಶದ ಅಲಹಾಬಾದ್‌ನಲ್ಲೂ, ರಾಜಾಸ್ಥಾನದ ಬುಂಡಿಯಲ್ಲೂ ಪತ್ರಿಕಾವರದಿಗಾರರಾಗಿದ್ದರು.

ದಕ್ಷಿಣ ಆಫ್ರಿಕಾ, ಭಾರತ, ಚೈನಾ, ಜಪಾನ್, ನ್ಯೂಜಿಲೆಂಡ್, ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ವ್ಯಾಪಕವಾಗಿ ಪರ್ಯಟಿಸಿ, ಆ ಕಾಲದ "ಅತೀವ ಪರ್ಯಟಕ ವ್ಯಕ್ತಿ" ಎನಿಸಿದ್ದರು.

ವಿವಾಹದ ಬಳಿಕ ಅಮೆರಿಕಾ ಸಂಯುಕ್ತ ಸಂಸ್ಥಾನಗಳ, ವರ್ಮಾಂಟ್‌ನಲ್ಲಿ "ಬ್ಲಿಸ್" ಎಂಬ ಸಣ್ಣ ಮನೆಯಲ್ಲೂ, ಆ ಬಳಿಕ ಅಲ್ಲಿಂದ ಅನತಿ ದೂರದಲ್ಲಿ, ವಿಶಾಲವಾದ, ಉದ್ಯಾನ ಮಧ್ಯದ "ನೌಲಖಾ" ಎಂಬ ಹೆಸರಿನ ತಮ್ಮದ್ರೇ ಸ್ವಂತ ಬಂಗಲೆಯಲ್ಲಿಯೂ ವಾಸವಾಗಿದ್ದರು. ಅಲ್ಲೇ 1896 ರಲ್ಲಿ ಅವರ ಎರಡನೇ ಮಗಳು "ಎಲ್ಸಿ" ಹುಟ್ಟಿದಳು. 1976 ರ ವರೆಗೆ ಆಕೆ ಬದುಕಿದ್ದಳು. ಅವರ ಮೂರನೇ ಮಗು "ಜಾನ್" 1898 ರಲ್ಲಿ ಹುಟ್ಟಿದನು.

ಕಟ್ಟಾ ದೇಶಪ್ರೇಮಿಯಾದ ಕಿಪ್ಲಿಂಗ್ ಅವರು ಮೊದಲ ವಿಶ್ವಮಹಾಯುದ್ಧದ ವೇಳೆ ಸ್ವಯಂ ಸೇವೆ ಸಲ್ಲಿಸಿದರು. ಒಬ್ಬನೇ ಮಗ ಜಾನ್‌ನನ್ನು ಪ್ರೇರೇಪಿಸಿ 1916 ರಲ್ಲಿ ಸೈನ್ಯಕ್ಕೆ ಸೇರಲು ಕಾರಣರಾದರು. ಲೆಫ್ಟಿನೆಂಟ್ ಆಗಿ ಸೈನ್ಯಕ್ಕೆ ಸೇರಿದ ಅವನು, ಸೇರಿದ ಸ್ವಲ್ಪ ದಿನಗಳಲ್ಲೇ ನಾಪತ್ತೆಯಾದನು. 1916 ರಲ್ಲಿ ನಾಪತ್ತೆಯಾದ ಅವನ ಶವವನ್ನು 1992 ರಲ್ಲಿ ಗುರುತಿಸಲಾಯಿತೆಂದರೆ ಸೋಜಿಗವೆನಿಸುತ್ತದೆ. ಯುದ್ಧಾನಂತರದಲ್ಲಿ ಕಿಪ್ಲಿಂಗ್ ಅವರು "ಇಂಪೀರಿಯಲ್ ವಾರ್ ಗ್ರೇವ್ಸ್" ಸಮಿತಿಯ ಸದಸ್ಯರಾಗಿ, ರುದ್ರಭೂಮಿಗಳನ್ನು, ಸುಂದರ ಉದ್ಯಾನಗಳನ್ನಾಗಿಸಲು ಕಾರಣರಾದರು.

ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರು 1936 ರಲ್ಲಿ ಮರಣ ಹೊಂದಿದರು. ಅವರ ಪಾರ್ಥಿವ ಶರೀರವನ್ನು, ಲಂಡನ್‌ನ ವೆಸ್ಟ್ ಮಿನಿಸ್ಟರ್ ಅಬ್ಬೇಯಲ್ಲಿನ ಪೊಯೆಟ್ಸ್ ಕಾರ್ನರ್‌ನಲ್ಲಿ ಮಣ್ಣು ಮಾಡಲಾಯಿತು. ಈ ರೀತಿಯಲ್ಲಿ ಅವರು

ಅಮರರಾದರು. ಅವರ ಪತ್ನಿ 'ಕ್ಯಾರಿ' ಸಹ ಅಲ್ಲಿಂದ ಸ್ವಲ್ಪ ದಿನಗಳಲ್ಲಿ, ಪತಿಯನ್ನು ಸೇರಿಕೊಂಡರು.

ರಡ್ಯಾರ್ಡ್ ಕಿಪ್ಲಿಂಗ್ ಅವರ ತಂದೆ ಸರ್ ಜಾನ್ ಲಾಕ್‌ವುಡ್ ಕಿಪ್ಲಿಂಗ್ ಅವರು ಉತ್ತಮ ಕಲಾಕಾರರೂ, ಚಿತ್ರಕಾರರೂ ಆಗಿದ್ದರು. 1857 ರಿಂದ ಖಾಸಗಿಯಾಗಿ ತಮ್ಮದೇ ಕಲಾಶಾಲೆಯನ್ನೂ, ವಸ್ತುಸಂಗ್ರಹಾಲಯವನ್ನೂ ಮುಂಬೈನಲ್ಲಿ ನಿರ್ವಹಿಸುತ್ತಿದ್ದರು. 1866 ರಲ್ಲಿ, ಸರ್ ಜೆಂಷೆಡ್‌ಜೀ ಜೀಜೀಭಾಯ್ ಅವರು ನೀಡಿದ 1 ಲಕ್ಷ ರೂ.ಗಳ ದಾನವನ್ನು ಮೂಲಧನವಾಗಿರಿಸಿಕೊಂಡು, ಕಿಪ್ಲಿಂಗ್ ಅವರ ಖಾಸಗಿ ಶಾಲೆ, ಸಂಗ್ರಹಾಲಯಗಳನ್ನು, ಬ್ರಿಟಿಷ್ ಸರಕಾರವು ವಶಪಡಿಸಿಕೊಂಡು ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್ ಆಗಿ ಪರಿವರ್ತಿಸಿತು. ಅವರ ವಾಸದ ಬಂಗಲೆ ಡೀನ್ ಅವರ ಬಂಗಲೆಯಾಯಿತು. ಸರ್ ಜಾನ್ ಲಾಕ್‌ವುಡ್ ಅವರೇ ಅದರ ಪ್ರಥಮ ಡೀನ್ ಆಗಿ ನೇಮಕವಾದರು.

ಮಹಾರಾಷ್ಟ್ರ ಸರ್ಕಾರವು ಈಗಾಗಲೇ ಎರಡು ಬಾರಿ ಪುನರ್ನವೀಕರಿಸಿ ಸುವ್ಯವಸ್ಥೆಗೊಳಿಸಿ ವಸ್ತು ಸಂಗ್ರಹಾಲಯವನ್ನು ಸಾರ್ವಜನಿಕರಿಗೆ ಮುಕ್ತಗೊಳಿಸಿದೆ. ಆಸುಪಾಸಿನಲ್ಲಿರುವ ಕ್ರಾಫರ್ಡ್ ಮಾರ್ಕೆಟ್, ಪೋಲಿಸ್ ಸ್ಟೇಷನ್, ಛತ್ರಪತಿ ಶಿವಾಜಿ ಟರ್ಮಿನಸ್‌ಗಳೂ ಸೇರಿದಂತೆ ಆ ಪ್ರದೇಶವನ್ನು "ಬೃಹತ್ ಪ್ರವಾಸೀ ತಾಣ"ವನ್ನಾಗಿ ಪರಿವರ್ತಿಸಿದೆ.

2007 ರಲ್ಲಿ ಭಾರತ ಸರ್ಕಾರವು, ಡೀನ್ಸ್ ಬಂಗಲೆಯನ್ನು ವಶಪಡಿಸಿಕೊಂಡು, ಮಹಾನ್ ವ್ಯಕ್ತಿ ಹಾಗೂ ಪ್ರಖ್ಯಾತ ಸಾಹಿತಿಯು ಹುಟ್ಟಿದ ಸ್ಥಳವನ್ನು ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ ಹೆಸರಿನಲ್ಲಿ ವಸ್ತು ಸಂಗ್ರಹಾಲಯವನ್ನಾಗಿ ಘೋಷಿಸಿದೆ.

2016 ಮರಿಗಳ ವಿಭಾಗದ ಶತಮಾನೋತ್ಸವ ವರ್ಷ. ಹಾಗಾಗಿ **ಬಿ. ಪಿ.** ಸ್ಮರಣೀಯರು. ಮರಿಗಳ ವಿಭಾಗದ ಸ್ಫೂರ್ತಿ ನೆಲೆ "ಕಾಡಿನ ಕತೆಗಳು" ಕಥನಕಾರರಾದ **ಸರ್ ರಡ್ಯಾರ್ಡ್ ಕಿಪ್ಲಿಂಗ್** ಸಹ ವಂದನೀಯರು.

i) ಕಬ್ ಮಾಸ್ಟರುಗಳೂ, ಮರಿಗಳ ವಿಭಾಗದ ತರಬೇತುದಾರರೂ, ಬಿಡುವು ಮಾಡಿಕೊಂಡು, ಸಾಧ್ಯವಾದರೆ ಮುಂಬೈ ಪ್ರವಾಸ ಕೈಗೊಂಡು, ಕಿಪ್ಲಿಂಗ್ ಪ್ರದೇಶವನ್ನೂ, ರಡ್ಯಾರ್ಡ್ ಕಿಪ್ಲಿಂಗ್ ಸಂಗ್ರಹಾಲಯವನ್ನೂ ಸಂದರ್ಶಿಸಿ.

ii) ಲಂಡನ್‌ಗೆ ಹೋಗುವಿರಾದರೆ, ಕಿಪ್ಲಿಂಗ್ ಅವರೊಡನೆ ಬಿ.ಪಿ. ನಡೆಸಿದ್ದ ಪತ್ರ ವ್ಯವಹಾರವನ್ನು, ಗಿಲ್ ವೆಲ್ ಪಾರ್ಕ್‌ನ ಡಾಕ್ಯುಮೆಂಟೇಷನ್ ಸೆಂಟರ್‌ನಲ್ಲಿ ಸಾಧ್ಯವಾದರೆ ನೋಡಲು ಮರೆಯಬೇಡಿ.

**ವಿ. ಸೂ.: ಮರಿಗಳಿಗೆ ಈ ಎಲ್ಲಾ ವಿವರಗಳ ಆವಶ್ಯಕತೆ ಇಲ್ಲ. ಸ್ಕೌಟರುಗಳಿಗೆ ಮಾತ್ರ ಈ ಮಾಹಿತಿ.**

## ಅನುಬಂಧ ೧

# ಮುದ್ದು ಹೆಸರುಗಳು

ಕಾಡಿನ ವಾತಾವರಣದಲ್ಲಿ, ಕಾಡಿನ ಕತೆಗಳ ಹಿನ್ನೆಲೆಯಲ್ಲಿ ನೀಡುವ ಶಿಕ್ಷಣವು ಮಕ್ಕಳ ಮನಸ್ಸಿನ ಮೇಲೆ ಹೆಚ್ಚು ಪ್ರಭಾವ ಬೀರುತ್ತದೆ. ಈ ರೀತಿಯ ಪ್ರಭಾವವು ಅವರ ಸಚ್ಚಾರಿತ್ರ್ಯನಿರ್ಮಾಣದಲ್ಲಿ ಮಹತ್ವಪೂರ್ಣ ಪಾತ್ರ ವಹಿಸುತ್ತದೆ. ಈ ದಿಕ್ಕಿನಲ್ಲಿ "ಗಿಲ್‌ಕ್ರಾಫ್ಟ್" ಪುಸ್ತಕಮಾಲಿಕೆಯಲ್ಲಿನ "ಮರಿಗಳು" ಪುಸ್ತಕವು ನೀಡಿರುವ ಒಂದು ಸಲಹಾತ್ಮಕ ಅಂಶವನ್ನು ಗಮನಿಸೋಣ. ಮಕ್ಕಳ ನಡೆನುಡಿ, ಆಚಾರ, ವಿಚಾರಗಳ ಅನ್ವಯ ಹಿಂಡಿನಲ್ಲಿ ಮರಿಗಳಿಗೆ, ಕಾಡಿನ ಕತೆಗಳಲ್ಲಿ ಬರುವ ಹಲವಾರು ಪಾತ್ರಗಳ ಮುದ್ದುಹೆಸರನ್ನಿಟ್ಟು (ನಿಕ್ ನೇಮ್ಸ್) ಕರೆಯಬಹುದಾದರೆ, ಆಯಾ ನಡೆಗಳ ಬಗ್ಗೆ ಒತ್ತು ನೀಡಿದಂತಾಗಿ, ಪ್ರಭಾವ ಹೆಚ್ಚುತ್ತದೆ. ಆ ಪುಸ್ತಕದಲ್ಲಿ ಸೂಚಿಸಿರುವ ಹಲವಾರು ಮುದ್ದು ಹೆಸರುಗಳನ್ನಿಲ್ಲಿ ಕೊಡಲಾಗಿದೆ.

ಕಾಲ, ದೇಶಕ್ಕೆ ತಕ್ಕಂತೆ ಹಲವು ಹೆಸರುಗಳನ್ನು ನಾವು ಮಾರ್ಪಡಿಸಿ ಹೇಳಬಹುದು. ಅತಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ, ಯಾವುದೇ ಸಂದರ್ಭದಲ್ಲೂ ನಕಾರಾತ್ಮಕ ಗುಣಗಳನ್ನು ಪ್ರತಿನಿಧಿಸುವ (ಉದಾ; ತಬಾಕಿ, ಷೇರ್‌ಖಾನ್, ಬಂದರ್ ಇತ್ಯಾದಿ) ಕಾಡಿನ ಕತೆಗಳಲ್ಲಿನ ಪಾತ್ರಗಳ ಹೆಸರಿನಿಂದ ಕರೆಯಬೇಡಿ. ಇದರಿಂದ ತಪ್ಪು ಗ್ರಹಿಕೆ ಮತ್ತು ಪರಿಣಾಮವುಂಟಾಗುತ್ತದೆ.

ಶಿಕ್ಷಕವರ್ಗ : ಕಬ್‌ಮಾಸ್ಟರು, ಸಹಾಯಕರು :
ಅಕೇಲ, ಬಾಲು, ಬಘೀರ, ರಕ್ಷ, ಕಾ

ಮರಿಗಳು :
- ಬರೆವಣಿಗೆ ಚೆನ್ನಾಗಿದ್ದು, ಹಿಂಡಿನ ಲಿಖಾವಟ್ಟುಗಳನ್ನು ಬರೆಯುವಲ್ಲಿ ಸಹಾಯಕ ........ ಸಾಹಿ/ಇಕ್ಕಿ
- ಲವಲವಿಕೆಯ ಸೂಕ್ಷ್ಮಮತಿ ........ ಮೌಗ್ಲಿ
- ಹಿಂಡಿನ ದಾಸ್ತಾನು ನಿರ್ವಹಣೆಯಲ್ಲಿ ಸಹಾಯಕ ........ ಬಿಳಿನಾಗರ/ಶ್ವೇತಫಣಿ
- ಅತಿ ಎತ್ತರದ ಮರಿ ........ ಟಾಲ್‌ಪೈನ್/ತೆಂಗಿನ ಮರ

- ಬೂದಣ್ಣಗಳು (ಗ್ರೇ ಬ್ರದರ್ಸ್) *
  (ಹಿರಿಯ/ಅಣ್ಣಂದಿರು ಚಾಲೂಕಿ,
  ಶಿಕ್ಷಿತ ಬಾಲಕರು) ........ಸಾಮಾನ್ಯವಾಗಿ ಆರಾಳಿಗಳು

- ಸಮಯಕ್ಕೆ ಸರಿಯಾದ
  ಸಲಹೆ ಹೇಳುವ ವಾರ್ತಾವಾಹಕ ........ಚೀಲ್

- ಸ್ವಚ್ಛತೆಗೆ ಹೆಸರಾದ ನೀಟುಗಾರ ಮರಿ ........ ಮೋರ್

- ಲವಲವಿಕೆಯ, ಸಹಾಯಕ ........ ರಿಕ್ಕಿ, ಟಿಕ್ಕಿ

- ದಡೂತಿ/ಮೋಟ ........ ರಾಮ

ಗಮನಿಸಿ: ಕತೆಗಳಿಗೆ ಸರಿಹೋಗುವ ಇತರ ಮುದ್ದುಹೆಸರುಗಳನ್ನೂ ಕಬ್‌ಮಾಸ್ಟರು ನೀಡಬಹುದು. ಕಾಡಿನ ಕತೆಗಳೇ ಅಲ್ಲದೆ ಇತರ ಕತೆಗಳನ್ನೂ ಮಕ್ಕಳಿಗೆ ಹೇಳುವ ಕಾರಣ, ಹೆಸರುಗಳನ್ನು ನೀಡುವ ಅವಕಾಶವು ವಿಫುಲವಾಗಿರುತ್ತದೆ.

---

* ಮೂಲದಲ್ಲಿ ನಾಲ್ಕು ತೋಳದ ಮರಿಗಳನ್ನು ಬೂದಣ್ಣಗಳು (ಗ್ರೇ ಬ್ರದರ್ಸ್) ಎಂದು ಮಾತ್ರ ಕರೆಯಲಾಗಿದೆ. ಎಂದರೆ ಅವುಗಳನ್ನು ಹಿರಿಯರು, ಅಣ್ಣಂದಿರು ಎಂಬ ಅರ್ಥದಲ್ಲಿ ಕರೆಯಲಾಗಿದೆ. ಅವುಗಳ ತುಪ್ಪಳದಲ್ಲಿ ಇರಬಹುದಾದ ಬಣ್ಣಗಳ ವ್ಯತ್ಯಾಸವನ್ನು ಗಮನಿಸಿ ನಾವು, ಅನುಕೂಲಕ್ಕಾಗಿ ಬೂದಣ್ಣ, ಕರಿಯಣ್ಣ, ಬಿಳಿಯಣ್ಣ, ಕಂದಣ್ಣ (ಕೆಂಪಣ್ಣ) ಎಂಬ ಪದಗಳನ್ನು ಕ್ರಿಯಾತ್ಮಕವಾಗಿ ಉಪಯೋಗಿಸುತ್ತೇವೆ.

## ಅನುಬಂಧ ೨

# ತೋಳ ಬಾಲಕ

ಈ ಪುಸ್ತಕದ ನಿರೂಪಕರು ತುಮಕೂರಿನ ಶ್ರೀ ಹನುಮಾನ್ ಸ್ಕೌಟ್ ಗುಂಪಿನ ಕ್ರಿಯಾಶೀಲ ಕಬ್‌ಮಾಸ್ಟರ್ ಆಗಿ 1949 ರಿಂದ 1959 ರವರೆಗೆ ಹಿಂಡನ್ನು ನಡೆಸುತ್ತಿದ್ದರು. ಆ ಅವಧಿಯಲ್ಲಿ—ಕರಾರುವಾಕ್ಕಾಗಿ ಜನವರಿ-ಫೆಬ್ರುವರಿ 1954 ಎನ್ನಿ—ವಿಶ್ವಕರ್ನಾಟಕ ದಿನಪತ್ರಿಕೆ ಹಾಗೂ ಇಲ್ಲಸ್ಟ್ರೇಟೆಡ್ ವೀಕ್ಲಿ ವಾರಪತ್ರಿಕೆಗಳಲ್ಲಿ "ವುಲ್ಫ್ ಬಾಯ್ ಆಫ್ ಲಕ್ನೋ" ಎಂಬ ಶೀರ್ಷಿಕೆಯಡಿ, ತೋಳಗಳು ಕೊಂಡೊಯ್ದು ಸಾಕುತ್ತಿದ್ದ ಬಾಲಕನನ್ನು ರಕ್ಷಿಸಿದ ಬಗ್ಗೆ; ಸಮಾಜದೊಡನೆ ಆ ಬಾಲಕನು ಬೆರೆಯಲು ನಡೆಸಿದ ಡಾಕ್ಟರುಗಳ ಪ್ರಯತ್ನದ ಬಗ್ಗೆ ಲೇಖನಗಳು ಬಂದಿದ್ದುವು. ನಿರೂಪಕರು ಸಂಗ್ರಹಿಸಿದ ಆ ಲೇಖನಗಳಿಂದ ಆಯ್ದ ಛಾಯಾಚಿತ್ರಗಳನ್ನು ಇಲ್ಲಿ ಕೊಡಲಾಗಿದೆ.



**ಆಸ್ಪತ್ರೆ ಸಿಬ್ಬಂದಿ**
**ತೋಳಬಾಲಕನನ್ನು ನಡೆಸುತ್ತಿರುವುದು**



**ವೈದ್ಯರುಗಳು**
**ತೋಳಬಾಲಕನಿಗೆ**
**ಚಿಕಿತ್ಸೆ ನೀಡುತ್ತಿರುವುದು**

# ಗ್ರಂಥಋಣ

1. ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ 'ಜಂಗಲ್ ಬುಕ್' 1943ರ ಪ್ರಕಟನೆ.

2. ಕಾಡಿನ ಕತೆಗಳು—ಮು. ವೆಂಕಟಕೃಷ್ಣಪ್ಪ, 1940ರ ಪ್ರಕಟನೆ.

3. ಕಾಡಿನ ಕುಣಿತಗಳು—
ಎಸ್. ಭೈರಪ್ಪ, ಮೈಸೂರು ಬಾಯ್ ಸ್ಕೌಟ್ಸ್ ರಾಜ್ಯಸಂಸ್ಥೆ ಪ್ರಕಟನೆ.

4. ಮರಿಗಳು—ಗಿಲ್ ಕ್ರಾಫ್ಟ್ ಪುಸ್ತಕ ಮಾಲೆ
ಎಸ್. ಭೈರಪ್ಪ, ಮೈಸೂರು ಬಾಯ್ ಸ್ಕೌಟ್ಸ್ ರಾಜ್ಯಸಂಸ್ಥೆ ಪ್ರಕಟನೆ.

5. ವುಲ್ಫ್ ಕಬ್ಸ್ ಹ್ಯಾಂಡ್ ಬುಕ್—ಬಿ. ಪಿ.

6. ಮರಿಗಳ ಕೂಗು—ಕಶ್ಯಪ 1936ರ ಪ್ರಕಟನೆ.

7. ಕಬ್ ಮಾಸ್ಟರ್ಸ್ ಹ್ಯಾಂಡ್ ಬುಕ್—
ಟಿ. ವಿ. ನೀಲಕಂಠಂ, ರಾಷ್ಟ್ರಕಥೇರಿ ಪ್ರಕಟನೆ.

8. ಸರ್ ರಡ್ಯಾರ್ಡ್ ಕಿಪ್ಲಿಂಗ್ ಅವರ ಜೀವನ ಪರಿಚಯಕ್ಕಾಗಿ ಇಂಟರ್ ನೆಟ್ ಸಹಾಯ ಪಡೆದಿದ್ದೇನೆ.

9. "ಬೃಹತ್ ಪ್ರವಾಸೀ ತಾಣ" ಹಾಗೂ "ಸರ್ ರಡ್ಯಾರ್ಡ್ ಕಿಪ್ಲಿಂಗ್ ವಸ್ತುಸಂಗ್ರಹಾಲಯ"ಗಳ ಬಗ್ಗೆ ತಿಳಿಸುವಾಗ "ಡೆಕ್ಕನ್ ಹೆರಾಲ್ಡ್" ವಾರ್ತಾಪತ್ರಿಕೆಯ (26-3-2015) ಸುದ್ದಿಯನ್ನು ಆಧಾರವಾಗಿರಿಸಿ ಕೊಂಡಿದ್ದೇನೆ.



